ಈ ಆದೇಶವನ್ನು ದಿನಾಂಕ: 1-7-2002 ರಂದು ಪ್ರಧಾನ ಕಾರ್ಯದರ್ಶಿ ಆರ್ಥಿಕ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಅಧಿಕಾರಯುಕ್ತ ಸಮಿತಿ ಸಭೆಯಲ್ಲಿ ಕೈಗೊಂಡ ತೀರ್ಮಾನದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

(ಹುಲಿಯಪ್ಪ)
ಸರ್ಕಾರದ ಅಧೀನ ಕಾರ್ಯದರ್ಶಿಗಳು - 1
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

ಗೆ,

1. ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು.
2. ನಿರ್ದೇಶಕರು, ಅಂಗವಿಕಲರ ಕಲ್ಯಾಣ ಇಲಾಖೆ, ಬೆಂಗಳೂರು
3. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು
4. ನಿರ್ದೇಶಕರು, ಸಿ.ಎಂ.ಬಿ. ವಿಭಾಗ, ಯೋಜನಾ ಇಲಾಖೆ
5. ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ, ಇವರ ಆಪ್ತ ಕಾರ್ಯದರ್ಶಿಗಳಿಗೆ, ವಿಧಾನ ಸೌಧ, ಬೆಂಗಳೂರು.
6. ಆಂತರಿಕ ಆರ್ಥಿಕ ಸಲಹೆಗಾರರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು
7. ಆರ್ಥಿಕ ಇಲಾಖೆ, ವೆಚ್ಚ-3, ವಿಧಾನಸೌಧ, ಬೆಂಗಳೂರು
8. ಶಾಖಾ ರಕ್ಷಣಾ ಕಡತ: ಹೆಚ್ಚುವರಿ ಪ್ರತಿಗಳು
9. ಎಲ್ಲಾ ಜಿಲ್ಲಾ ಸಹಾಯಕ ನಿರ್ದೇಶಕರು, ಮಮಅ ಇಲಾಖೆ ಹಾಗೂ ಎಲ್ಲಾ ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿಗಳು.

ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ರಾಜ್ಯದಲ್ಲಿನ ವಿಕಲಚೇತನ ವಿದ್ಯಾರ್ಥಿಗಳಿಗೆ ಪ್ರಸ್ತುತ ನೀಡುತ್ತಿರುವ ವಿದ್ಯಾರ್ಥಿ ವೇತನವನ್ನು ದ್ವಿಗುಣ ಗೊಳಿಸುವ ಬಗ್ಗೆ.

ಓದಲಾಗಿದೆ: 1) ಸರ್ಕಾರದ ಆದೇಶ ಸಂಖ್ಯೆ: ಮಮಇ 404 ಪಿಹೆಚ್‌ಪಿ 2001, ದಿನಾಂಕ:04-09-2001

2) ಸರ್ಕಾರದ ಆದೇಶ ಸಂಖ್ಯೆ: ಮಮಇ 293 ಪಿಹೆಚ್‌ಪಿ 2013, ದಿನಾಂಕ:01-02-2014

3) ನಿರ್ದೇಶಕರು,ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರ ಪತ್ರ ಸಂಖ್ಯೆ: ವಿಹಿನಾಸಇ/ಯೋಜನೆ/ವಿ.ವೇತನ/07/ 2013-14/ 1292, ದಿನಾಂಕ:30-06-2014

ಪ್ರಸ್ತಾವನೆ:

ರಾಜ್ಯದಲ್ಲಿ ವಿಕಲಚೇತನ ವಿದ್ಯಾರ್ಥಿಗಳಿಗೆ 1ನೇ ತರಗತಿಯಿಂದ ಸ್ನಾತಕೋತ್ತರ ಕೋರ್ಸ್‌ಗಳ ವರೆಗೆ (ತಾಂತ್ರಿಕ ಶಿಕ್ಷಣವನ್ನೊಳಗೊಂಡಂತೆ) ನೀಡುವ ವಿದ್ಯಾರ್ಥಿ ವೇತನ ದರವನ್ನು ಮೇಲೆ ಕ್ರಸಂ.(1)ರಲ್ಲಿ ಓದಲಾದ ದಿನಾಂಕ:4-9-2001ರ ಸರ್ಕಾರಿ ಆದೇಶದಲ್ಲಿ ಕೆಳಕಂಡಂತೆ ಪರಿಷ್ಕರಿಸಲಾಗಿತ್ತು.

| ಕ್ರಸಂ | ತರಗತಿವಾರು | ಮಾಹೆಯಾನ ಹಾಲಿ ರೂ. | ಮಾಹೆಯಾನ ಪರಿಷ್ಕೃತ ದರ ರೂ. |
|---|---|---|---|
| 1 | 1 ರಿಂದ 5ನೇ ತರಗತಿ | 25/- | 50/- |
| 2 | 6 ರಿಂದ 8ನೇ ತರಗತಿ | 35/- | 100/- |
| 3 | 9, 10ನೇ ತರಗತಿಗಳು | 85/- | 100/- |
| 4 | ಪಿ.ಯು.ಸಿ | 85/- | 150/- |
| 5 | ಬಿ.ಎ/ಬಿ.ಎಸ್ಸಿ/ಬಿ.ಕಾಂ/ಇತರೆ ಪದವಿಧರರು ಹಾಗೂ ಟಿ.ಸಿ.ಹೆಚ್/ತತ್ಸಮಾನ | 125/- | 200/- |
| 6 | ಬಿ.ಇ, ಬಿ.ಟೆಕ್, ಎಂ.ಬಿ.ಬಿ.ಎಸ್, ಎಲ್.ಎಲ್.ಬಿ/ ಡಿಪ್ಲೊಮೋ ಇನ್ ಪ್ರಫೆಷನ್ ಮತ್ತು ಇಂಜಿನಿಯರಿಂಗ್ ಇನ್ ಪ್ಲ್ಯಾಂಟ್ ಟ್ರೈನಿಂಗ್ | 170/- | 250/- |
| 7 | ಎಂ.ಎ/ಎಂ.ಎಸ್ಸಿ/ಎಂ.ಕಾಂ/ಎಲ್.ಎಲ್.ಎಂ ಹಾಗೂ ತತ್ಸಮಾನ | 170/- | 300/- |



..2

ಆದೇಶದಲ್ಲಿ ಪರಿಷ್ಕರಿಸಿ ಕೆಳಕಂಡಂತೆ ನಿಗದಿಪಡಿಸಲಾಗಿದೆ.

| ಕ್ರ.ಸಂ | ತರಗತಿವಾರು | ದಿ:1-2-2014ರ ಆದೇಶದ ಪೂರ್ವದಲ್ಲಿ ನೀಡಲಾಗುತ್ತಿದ್ದ ವಿದ್ಯಾರ್ಥಿ ವೇತನ ಮಾಹೆಯಾನ | ದಿ:1-2-2014ರ ಆದೇಶದನ್ವಯ ಪರಿಷ್ಕೃತ ವಿದ್ಯಾರ್ಥಿ ವೇತನ |
|---|---|---|---|
| 1 | 1 ರಿಂದ 5 | 50/- | 100/- |
| 2 | 6 ರಿಂದ 10 | 100/- | 200/- |
| 3 | ಪಿ.ಯು.ಸಿ | 150/- | 300/- |
| 4 | ಬಿ.ಎ/ಬಿ.ಎಸ್ಸಿ/ಬಿ.ಕಾಂ/ಇತರೆ ಪದವಿಧರರು ಹಾಗೂ ಟಿ.ಸಿ.ಹೆಚ್/ತತ್ಸಮಾನ | 200/- | 400/- |

ರಾಜ್ಯದಲ್ಲಿರುವ ವಿಕಲಚೇತನ ವಿದ್ಯಾರ್ಥಿಗಳು ಶಿಕ್ಷಣವನ್ನು ಮುಂದುವರೆಸಲು ಪ್ರೋತ್ಸಾಹ ನೀಡುವ ಮತ್ತು ಅವರನ್ನು ಸಮಾಜದ ಮುಖ್ಯವಾಹಿನಿಗೆ ತರುವ ಉದ್ದೇಶದಿಂದ ಹಾಲಿ ನೀಡುತ್ತಿರುವ ವಿದ್ಯಾರ್ಥಿವೇತನವನ್ನು ಎರಡು ಪಟ್ಟು ಪರಿಷ್ಕರಣೆ ಮಾಡಲು 2.6 ಕೋಟಿ ರೂ ಗಳನ್ನು 2014-15ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾಗಿದೆ.

ವಿಕಲಚೇತನ ವಿದ್ಯಾರ್ಥಿಗಳಿಗೆ ನೀಡಲಾಗುತ್ತಿರುವ ವಿದ್ಯಾರ್ಥಿ ವೇತನದ ದರಗಳನ್ನು ಮೇಲ್ಕಂಡ ಆದೇಶಗಳಲ್ಲಿ 1ನೇ ತರಗತಿಯಿಂದ ಪದವಿ ಹಂತದವರೆಗೆ ಅಥವಾ ತತ್ಸಮಾನ ಕೋರ್ಸ್‌ಗಳಿಗೆ ಮಾತ್ರ ಪರಿಷ್ಕರಿಸಿದೆ ಈ ಆದೇಶದಲ್ಲಿ ವೈದ್ಯಕೀಯ ಮತ್ತು ತಾಂತ್ರಿಕ ಶಿಕ್ಷಣ, ತತ್ಸಮಾನ ಹಾಗೂ ಸ್ನಾತಕೋತ್ತರ ಅಥವಾ ತತ್ಸಮಾನ ಕೋರ್ಸ್‌ಗಳ ವಿದ್ಯಾರ್ಥಿ ವೇತನ ದರಗಳನ್ನು ಪರಿಷ್ಕರಿಸಿರುವುದಿಲ್ಲ ಈ ಬಗ್ಗೆ ಸೂಕ್ತ ಸ್ಪಷ್ಟ ಆದೇಶ ಹೊರಡಿಸುವಂತೆ ನಿರ್ದೇಶಕರು ವಿಕಲಚೇತನ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ರವರು ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 167 ಪಿಹೆಚ್‌ಪಿ 2014, ಬೆಂಗಳೂರು, ದಿನಾಂಕ: 5-2-2015**

ಪ್ರಸ್ತಾವದಲ್ಲಿ ವಿವರಿಸಿದ ಕಾರಣಗಳಿಂದ, ರಾಜ್ಯದಲ್ಲಿನ ವಿಕಲಚೇತನ ವಿದ್ಯಾರ್ಥಿಗಳಿಗೆ 1ನೇ ತರಗತಿಯಿಂದ ಸ್ನಾತಕೋತ್ತರ ತರಗತಿ ವರೆಗೆ ನೀಡುತ್ತಿರುವ ವಿದ್ಯಾರ್ಥಿವೇತನ ದರವನ್ನು ದುಪ್ಪಟ್ಟು ಗೊಳಿಸಿ ಕೆಳಕಂಡಂತೆ ಪರಿಷ್ಕರಿಸಿದೆ.

| ಕ್ರ.ಸಂ. | ತರಗತಿವಾರು | ಹಾಲಿ ನಿಡುತ್ತಿರುವ ವಿದ್ಯಾರ್ಥಿ ವೇತನ ಮಾಹೆಯಾನ | ಪರಿಷ್ಕೃತ ವಿದ್ಯಾರ್ಥಿ ವೇತನ ಮಾಹೆಯಾನ |
|---|---|---|---|
| 1 | 1 ರಿಂದ 5 | 100/- | 200/- |
| 2 | 6 ರಿಂದ 10 | 200/- | 400/- |
| 3 | ಪಿ.ಯು.ಸಿ | 300/- | 600/- |
| 4 | ಬಿ.ಎ/ಬಿ.ಎಸ್ಸಿ/ಬಿ.ಕಾಂ/ಇತರೆ ಪದವಿಧರರು ಹಾಗೂ ಟಿ.ಸಿ.ಹೆಚ್/ತತ್ಸಮಾನ | 400/- | 800/- |
| 5 | ಬಿ.ಇ, ಬಿ.ಟೆಕ್, ಎಂ.ಬಿ.ಬಿ.ಎಸ್, ಎಲ್.ಎಲ್.ಬಿ/ ಡಿಪ್ಲೋಮೋ ಇನ್ ಪ್ರಫೆಷನ್ ಮತ್ತು ಇಂಜಿನಿಯರಿಂಗ್ ಇನ್ ಪ್ಲ್ಯಾಂಟ್ ಟ್ರೈನಿಂಗ್ | 250/- | 500/- |
| 6 | ಎಂ.ಎ/ಎಂ.ಎಸ್ಸಿ/ಎಂ.ಕಾಂ/ಎಲ್.ಎಲ್.ಎಂ ಹಾಗೂ ತತ್ಸಮಾನ | 300/- | 600/- |

ಈ ಯೋಜನೆಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2235-02-101-0-05 ಉಪ ಲೆಕ್ಕಶೀರ್ಷಿಕೆ-117 ಯೋಜನೇತರದಲ್ಲಿ ಒದಗಿಸಲಾದ ಅನುದಾನದ ಮಿತಿಯಲ್ಲಿಯೇ ಭರಿಸತಕ್ಕದ್ದು.

ಈ ಆದೇಶವನ್ನು ಕ್ರಮವಾಗಿ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 627 ವೆಚ್ಚ-3 2014 ದಿನಾಂಕ:26-8-2014 ಮತ್ತು ಯೋಜನಾ ಇಲಾಖೆ ಟಿಪ್ಪಣಿ ಸಂಖ್ಯೆ: ಪಿಡಿ 51 ಪಿಎಂಐ 2014. ದಿನಾಂಕ: 3-11-2014ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

(ಲಲಿತ)
ಸರ್ಕಾರದ ಅಧೀನ ಕಾರ್ಯದರ್ಶಿ - 2
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ
ಹಾಗೂ ವಿಕಲಚೇತನರ ಮತ್ತು ಹಿರಿಯ
ನಾಗರಿಕರ ಸಬಲೀಕರಣ ಇಲಾಖೆ.

ಇವರಿಗೆ:-

1. ಪ್ರಧಾನ ಮಹಾಲೇಖಪಾಲರು, (ಜಿ & ಎಸ್ ಎಸ್ ಎ )ಕರ್ನಾಟಕ, ಹೊಸ ಕಟ್ಟಡ, "ಆಡಿಟ್ ಭವನ", ಅಂಚೆ ಪೆಟ್ಟಿಗೆ ಸಂಖ್ಯೆ:5398, ಬೆಂಗಳೂರು-560001.
2. ಪ್ರಧಾನ ಮಹಾಲೇಖಪಾಲರು, (ಇ & ಆರ ಎಸ್ ಎ )ಕರ್ನಾಟಕ, ಹೊಸ ಕಟ್ಟಡ, "ಆಡಿಟ್ ಭವನ", ಅಂಚೆ ಪೆಟ್ಟಿಗೆ ಸಂಖ್ಯೆ:5398, ಬೆಂಗಳೂರು-560001.
3. ಪ್ರಧಾನ ಮಹಾಲೇಖಪಾಲರು, (ಎ & ಇ )ಕರ್ನಾಟಕ, ಹೊಸ ಪಾರ್ಕ್ ಹೌಸ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ:5329, ಬೆಂಗಳೂರು-560001.
4. ನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ಬೆಂಗಳೂರು.
5. ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಬೆಂಗಳೂರು.
6. ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ , ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನಸೌಧ.
7. ಆಂತರಿಕ ಆರ್ಥಿಕ ಸಲಹೆಗಾರರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು.
8. ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವೆಚ್ಚ-3 & 9).
9. ನಿರ್ದೇಶಕರು, ಯೋಜನಾ ಇಲಾಖೆ (ಪಿ.ಎಂ.ಐ.ವಿಭಾಗ).
10. ಎಲ್ಲಾ ಜಿಲ್ಲೆಯ ಉಪ ನಿರ್ದೇಶಕರು/ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ (ನಿರ್ದೇಶಕರ ಮುಖಾಂತರ).
11. ಎಲ್ಲಾ ಜಿಲ್ಲೆಯ ಅಂಗವಿಕಲರ ಕಲ್ಯಾಣಾಧಿಕಾರಿಗಳು, ಉಪ ನಿರ್ದೇಶಕರ ಕಛೇರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ (ನಿರ್ದೇಶಕರ ಮುಖಾಂತರ).
12. ಶಾಖಾ ರಕ್ಷಾ ಕಡತ/ ಓ.ಡಿ.ಜಿ.ಸಿ / ಸೂಚನಾ ಫಲಕ / ಹೆಚ್ಚುವರಿ ಪ್ರತಿಗಳು.

ಪ್ರತಿ:

1. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಇಲಾಖೆ ಇವರ ಆಪ್ತ ಕಾರ್ಯದರ್ಶಿ.
2. ಸರ್ಕಾರದ ಉಪ ಕಾರ್ಯದರ್ಶಿ, ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಇಲಾಖೆ ಇವರ ಆಪ್ತ ಸಹಾಯಕರು.

## ಕರ್ನಾಟಕ ಸರ್ಕಾರ

ವಿಷಯ: ಪ್ರತಿಭಾವಂತ ಅಂಗವಿಕಲ ವಿದ್ಯಾರ್ಥಿಗಳಿಗೆ ಪ್ರೋತ್ಸಾಹಧನ ನೀಡುವ ಯೋಜನೆಯ ಕುರಿತು ಆದೇಶ.

ಉಲ್ಲೇಖ: 1. ಸರ್ಕಾರಿ ಆದೇಶ ಸಂಖ್ಯೆ: ಸಕಕಾ: 162:ಪಿಹೆಚ್‌ಪಿ; 91: ದಿನಾಂಕ: 31-12-1992.

2. ಪತ್ರಸಂಖ್ಯೆ. ನಿಅಕಇ: ಪ್ಲಾನ್: ಐಎಡಿ: 92-93 ದಿನಾಂಕ: 31-7-1992.

### ಪ್ರಸ್ತಾವನೆ:

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಪ್ರತಿಭಾವಂತ ಅಂಗವಿಕಲ ಮಕ್ಕಳಿಗೆ ಪ್ರೋತ್ಸಾಹಧನ ನೀಡುವ ಯೋಜನೆಯೊಂದನ್ನು 1991-92ನೇ ಸಾಲಿನಲ್ಲಿ ಜಾರಿಗೆ ತರಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ನಿರ್ದೇಶಕರು, ಅಂಗವಿಕಲರ ಕಲ್ಯಾಣ ಇಲಾಖೆ, ಬೆಂಗಳೂರು ಇವರು ಸದರಿ ಯೋಜನೆಯ ಕಂಡಿಕೆ 6ರ ಪ್ರಕಾರ ಬಹುಮಾನ ಪಡೆಯಲು ಅರ್ಹತೆ ಪಡೆಯಬೇಕಾದರೆ ಪ್ರತಿಭಾವಂತ ಅಂಗವಿಕಲ ವಿದ್ಯಾರ್ಥಿಯು ಪ್ರತಿಶತ 70 ಅದಕ್ಕೂ ಹೆಚ್ಚು ಅಂಕಗಳನ್ನು ಪಡೆಯಬೇಕೆಂದು ಷರತ್ತು ಇದೆ. ಇಲಾಖೆಯ ಪ್ರಾಯೋಗಿಕ ಅನುಭವದಿಂದ ಇಷ್ಟು ಹೆಚ್ಚು ಅಂಕ ಪಡೆದ ಅಂಗವಿಕಲ ವಿದ್ಯಾರ್ಥಿಗಳು ಸಾಕಷ್ಟು ಸಿಗುವುದಿಲ್ಲವೆಂಬುದು ಈಗ ಕಂಡುಬಂದಿರುವುದರಿಂದ ಸದರಿ ಯೋಜನೆಯ ಪ್ರಯೋಜನವನ್ನು ಅಂಗವಿಕಲ ವಿದ್ಯಾರ್ಥಿಗಳಿಗೆ ತಲುಪಿಸಲು ಸದ್ಯದ ಪ್ರತಿಶತ 70 ಅಂಕಗಳನ್ನು ಪಡೆಯಬೇಕೆಂಬುದನ್ನು ಪ್ರತಿಶತ 60 ಅಂಕಗಳಿಗೆ ಇಳಿಸಿ, ನಿಯಮ ಮಾರ್ಪಡಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

### ಸರ್ಕಾರಿ ಆದೇಶ ಸಂಖ್ಯೆ: ಸಕಕಾ: 223: ಪಿಹೆಚ್‌ಪಿ: 92 ಬೆಂಗಳೂರು, ದಿನಾಂಕ: 31-12-1992.

ಅಂಗವಿಕಲರ ಕಲ್ಯಾಣ ಇಲಾಖೆ ನಿರ್ದೇಶಕರು, ಬೆಂಗಳೂರು ರವರ ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ, ಸರ್ಕಾರಿ ಆದೇಶ ಸಂಖ್ಯೆ: ಸಕಕಾ: 162: ಪಿಹೆಚ್‌ಪಿ: 91, ದಿನಾಂಕ: 30-9-1991ರ ಅನುಬಂಧ-1ರಲ್ಲಿನ ನಿಯಮ 6ರಲ್ಲಿ ನಮೂದಿಸಿರುವ ಪ್ರತಿಭಾವಂತ ಅಂಗವಿಕಲ ವಿದ್ಯಾರ್ಥಿಗಳನ್ನು ಪ್ರೋತ್ಸಾಹಧನ ಪಡೆಯಲು ನಿಗದಿಪಡಿಸಿದ ಪ್ರತಿಶತ ಶೇ.70 ಮತ್ತು ಅದಕ್ಕಿಂತ ಹೆಚ್ಚು ಅಂಕಗಳನ್ನು ಪಡೆಯಬೇಕೆಂಬುದನ್ನು ಪ್ರತಿಶತ 60ಕ್ಕೆ ಇಳಿಸಿ ಸರ್ಕಾರವು ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಸಹಿ, (ಎಸ್.ಕೆ. ಶ್ರೀಕಂಠಯ್ಯ)
ಸರ್ಕಾರದ ಅಧೀನ ಕಾರ್ಯದರ್ಶಿ,
ಸಮಾಜ ಕಲ್ಯಾಣ ಮತ್ತು ಕಾರ್ಮಿಕ ಇಲಾಖೆ

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಪ್ರತಿಭಾವಂತ ಅಂಗವಿಕಲ ವಿದ್ಯಾರ್ಥಿಗಳಿಗೆ ನೀಡುತ್ತಿರುವ ಪ್ರೋತ್ಸಾಹ ಬಹುಮಾನ ಯೋಜನೆಯನ್ನು ವಿಸ್ತರಿಸುವ ಬಗ್ಗೆ.

ಓದಲಾಗಿದೆ: 1. ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂ ಎಲ್ :162:ಪಿಹೆಚ್‌ಸಿ:91:ದಿನಾಂಕ: 30-9-1991.

2. ನಿರ್ದೇಶಕರು, ಅಂಗವಿಕಲ ಕಲ್ಯಾಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ನಿಅಕಇ:ಯೋಜನೆ:41:2001-02:ದಿನಾಂಕ:30-5-2002.

3. ದಿನಾಂಕ: 1-7-2002 ರಂದು ನಡೆದ ಅಧಿಕಾರಯುಕ್ತ ಸಮಿತಿ ಸಭೆಯ ನಡವಳಿಗಳು.

### ಪ್ರಸ್ತಾವನೆ:

ಮೇಲೆ ಓದಲಾದ (1)ರ ದಿನಾಂಕ: 30-9-1991ರ ಆದೇಶದಲ್ಲಿ ಅಂಗವಿಕಲ ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸುವ ಸಲುವಾಗಿ ಪ್ರತಿಭಾವಂತ ಅಂಗವಿಕಲ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ಬಹುಮಾನ ಯೋಜನೆಯನ್ನು ಜಾರಿಗೊಳಿಸಲಾಯಿತು. ಸದರಿ ಯೋಜನೆಯಡಿ ಎಸ್‌ಎಸ್‌ಎಲ್‌ಸಿ, ಪಿಯುಸಿ, ಬಿಎ, ಬಿಎಸ್ಸಿ, ಬಿಕಾಂ, ಎಂಎ, ಎಂಎಸ್ಸಿ, ಎಂಕಾಂ, ಮುಂತಾದ 2 ವರ್ಷದ ಅವಧಿಗೆ ಮೀರದ ಸ್ನಾತಕೋತ್ತರ ಪದವಿ ವಿದ್ಯಾರ್ಥಿಗಳಿಗೆ ನೀಡಲಾಗುತ್ತಿದೆ. ಅದೇ ರೀತಿ ಕೃಷಿ ವಿಜ್ಞಾನ, ಪದವಿ ಶಿಕ್ಷಣ, ಇಂಜನಿಯರಿಂಗ್ ಟೆಕ್ನಾಲಜಿ, ವೈದ್ಯಕೀಯ, ಪಶು ವೈದ್ಯಕೀಯ ಶಿಕ್ಷಣದ ವಿದ್ಯಾರ್ಥಿಗಳಿಗೂ ಯೋಜನೆಯನ್ನು ವಿಸ್ತರಿಸಲಾಗಿದೆ.

ಮೇಲೆ ಓದಲಾದ (2)ರ ದಿನಾಂಕ: 30-5-2002ರ ಪತ್ರದಲ್ಲಿ ನಿರ್ದೇಶಕರು, ಅಂಗವಿಕಲ ಕಲ್ಯಾಣ ಇಲಾಖೆ, ಇವರು ಮಧ್ಯಮ ವರ್ಗದ ಅಂಗವಿಕಲರು ಹೆಚ್ಚು ಸಂಖ್ಯೆಯಲ್ಲಿ ಟಿಸಿಹೆಚ್, ಬಿಎಡ್ ಮತ್ತು ಎಂಎಡ್ ಶಿಕ್ಷಣಗಳಲ್ಲಿ ವ್ಯಾಸಂಗ ಮಾಡುತ್ತಿದ್ದು, ಸದರಿ ಅವರಿಗೆ ಪ್ರೋತ್ಸಾಹ ಬಹುಮಾನ ಯೋಜನೆಯಲ್ಲಿ ಅವಕಾಶ ಕಲ್ಪಿಸಿಲ್ಲವೆಂದು ಇತ್ತೀಚಿನ ದಿನಗಳಲ್ಲಿ ಮೇಲ್ಕಂಡ ಪಠ್ಯಕ್ರಮಗಳಲ್ಲಿ ಹೆಚ್ಚಿನ ಅಂಗವಿಕಲರು ವ್ಯಾಸಂಗ ಮಾಡುತ್ತಿದ್ದು, ಅಂಗವಿಕಲರ ಹಿತದೃಷ್ಟಿಯಿಂದ ಅವರಿಗೂ ಪ್ರೋತ್ಸಾಹ ನೀಡಲು ಈ ಯೋಜನೆಯನ್ನು ವಿಸ್ತರಿಸಲು ಪ್ರಸ್ತಾಪಿಸಿರುತ್ತಾರೆ.

ಮೇಲೆ ಓದಲಾದ (3)ರ ದಿನಾಂಕ: 1-7-2002 ರಂದು ನಡೆದ ಅಧಿಕಾರಯುಕ್ತ ಸಮಿತಿ ಸಭೆಯಲ್ಲಿ ಪ್ರಸ್ತಾವನೆಯನ್ನು ಪರಿಶೀಲಿಸಿ ತೀರ್ಮಾನಿಸಲಾಯಿತು.

ಆದುದರಿಂದ ಈ ಆದೇಶ

### ಸರ್ಕಾರದ ಆದೇಶ ಸಂಖ್ಯೆ: ಮಮಅ:288:ಪಿಹೆಚ್‌ಸಿ:2002, ಬೆಂಗಳೂರು ದಿ: 19-09-2002

ನಿರ್ದೇಶಕರು, ಅಂಗವಿಕಲರ ಕಲ್ಯಾಣ ಇಲಾಖೆ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಪ್ರತಿಭಾವಂತ ಅಂಗವಿಕಲ ವಿದ್ಯಾರ್ಥಿಗಳಿಗೆ ನೀಡುತ್ತಿರುವ ಪ್ರೋತ್ಸಾಹ ಬಹುಮಾನ ಯೋಜನೆಯನ್ನು ಈ ಕೆಳಕಂಡ ಕೋರ್ಸ್‌ಗಳಲ್ಲಿ ವ್ಯಾಸಂಗ ಮಾಡುತ್ತಿರುವವರಿಗೂ ವಿಸ್ತರಿಸಿ ಮಂಜೂರಾತಿ ನೀಡಿದೆ.

ಅ) ಟಿ.ಸಿ.ಹೆಚ್. - ರೂ. 1000-00 ಗಳು

ಆ) ಬಿಇಡಿ - ರೂ. 1200-00 ಗಳು

ಇ) ಎಂಇಡಿ - ರೂ. 1500-00 ಗಳು

ಪ್ರಸ್ತಾವನೆಗೆ ತಗಲುವ ವೆಚ್ಚವನ್ನು 2002-2003ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ: 2235-03-101-0-09 (ಯೋಜನೇತರ) ಅಡಿ ಲಭ್ಯವಿರುವ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ದಿನಾಂಕ: 1-7-2002 ರಂದು ಪ್ರಧಾನ ಕಾರ್ಯದರ್ಶಿ ಆರ್ಥಿಕ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಅಧಿಕಾರಯುಕ್ತ ಸಮಿತಿ ಸಭೆಯಲ್ಲಿ ಕೈಗೊಂಡ ತೀರ್ಮಾನದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

(ಹುಲಿಯಪ್ಪ)
ಸರ್ಕಾರದ ಅಧೀನ ಕಾರ್ಯದರ್ಶಿಗಳು - 1
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

ಗೆ,

1. ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು.
2. ನಿರ್ದೇಶಕರು, ಅಂಗವಿಕಲರ ಕಲ್ಯಾಣ ಇಲಾಖೆ, ಬೆಂಗಳೂರು
3. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು
4. ನಿರ್ದೇಶಕರು, ಸಿ.ಎಂ.ಬಿ. ವಿಭಾಗ, ಯೋಜನಾ ಇಲಾಖೆ
5. ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ, ಇವರ ಆಪ್ತ ಕಾರ್ಯದರ್ಶಿಗಳಿಗೆ, ವಿಧಾನ ಸೌಧ, ಬೆಂಗಳೂರು.
6. ಆಂತರಿಕ ಆರ್ಥಿಕ ಸಲಹೆಗಾರರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು
7. ಆರ್ಥಿಕ ಇಲಾಖೆ, ವೆಚ್ಚ-3, ವಿಧಾನಸೌಧ, ಬೆಂಗಳೂರು
8. ಶಾಖಾ ರಕ್ಷಣಾ ಕಡತ: ಹೆಚ್ಚುವರಿ ಪ್ರತಿಗಳು
9. ಎಲ್ಲಾ ಜಿಲ್ಲಾ ಸಹಾಯಕ ನಿರ್ದೇಶಕರು, ಮಮತೆ ಇಲಾಖೆ ಹಾಗೂ ಎಲ್ಲಾ ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿಗಳು.

# ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ:– ವಿಕಲಚೇತನರ ವ್ಯಕ್ತಿಗಳೊಡನೆ ವಿವಾಹ ಏರ್ಪಡುವ ಪ್ರಕರಣಗಳಲ್ಲಿ, ಉನ್ನತ ಶಿಕ್ಷಣ ಪಡೆಯುವ ವಿಕಲಚೇತನರಿಗೆ ಉನ್ನತ ಶಿಕ್ಷಣ ಹಾಗೂ ತಾಂತ್ರಿಕ ಶಿಕ್ಷಣದ ಶುಲ್ಕವನ್ನು ಮರುಪಾವತಿ ಮಾಡುವ ಬಗ್ಗೆ

ಓದಲಾಗಿದೆ: ನಿರ್ದೇಶಕರು, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ,ಬೆಂಗಳೂರು ಇವರ ಪತ್ರ ಸಂಖ್ಯೆ:ವಿಹಿನಾಸಇ/ಯೋಜನೆ/ಉಶಿಶುಮ/12/ 2013–14/1366, ದಿನಾಂಕ: 24-7-2013.

ಪ್ರಸ್ತಾವನೆ:

ಮೇಲೆ ಓದಲಾದ ದಿನಾಂಕ: 24-7-2013ರ ಪತ್ರದಲ್ಲಿ, ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರು, ಮಾನ್ಯ ಮುಖ್ಯ ಮಂತ್ರಿಯವರು ದಿನಾಂಕ:12-7-2013ರಂದು ಮಂಡಿಸಿರುವ 2013-14ನೇ ಸಾಲಿನ ಆಯವ್ಯಯ ಭಾಷಣದ ಕ್ರಮಸಂಖ್ಯೆ: 230ರಲ್ಲಿ, 'ವಿಕಲಚೇತನರ ವ್ಯಕ್ತಿಗಳೊಡನೆ ವಿವಾಹ ಏರ್ಪಡುವ ಪ್ರಕರಣಗಳಲ್ಲಿ, ವಿಕಲಚೇತನರಿಗೆ ಉನ್ನತ ಶಿಕ್ಷಣ/ತಾಂತ್ರಿಕ ಶಿಕ್ಷಣದ ಶುಲ್ಕವನ್ನು ಹಿಂಬರಿಸಲಾಗುವುದು' ಎಂದು ಘೋಷಿಸಿರುತ್ತಾರೆ.

2001ರ ಜನಗಣತಿಯ ಪ್ರಕಾರ 9,40,643 ವಿಕಲಚೇತನರಿದ್ದು, ಅವರಲ್ಲಿ 15 ರಿಂದ 26ರ ವಯೋಮಾನದ ಸುಮಾರು 3.00 ಲಕ್ಷ ವಿಕಲಚೇತನರು ಇರುತ್ತಾರೆಂದು ಅಂದಾಜಿಸಲಾಗಿದೆ. ಇವರುಗಳು ಎಸ್.ಎಸ್.ಎಲ್.ಸಿ ನಂತರದ ಶಿಕ್ಷಣ, ಉನ್ನತ ಶಿಕ್ಷಣ, ತಾಂತ್ರಿಕ ಶಿಕ್ಷಣ, ವೈದ್ಯಕೀಯ ಶಿಕ್ಷಣ ಮತ್ತು ಔದ್ಯೋಗಿಕ ಶಿಕ್ಷಣಗಳಲ್ಲಿ ವ್ಯಾಸಂಗ ಮಾಡಲು ಪ್ರತಿಭಾವಂತರಾಗಿದ್ದರೂ ಸಹ ಸರ್ಕಾರವು ನಿಗದಿಪಡಿಸಿರುವ ಶುಲ್ಕವನ್ನು ಭರಿಸಲು ಶಕ್ತರಿಲ್ಲದ ಕಾರಣ ಉನ್ನತ ಶಿಕ್ಷಣವನ್ನು ಮುಂದುವರೆಸಲು ಸಾಧ್ಯವಾಗದೇ ಶಿಕ್ಷಣದಿಂದ ವಂಚಿತರಾಗುತ್ತಿದ್ದಾರೆ. ಈ ದಿಸೆಯಲ್ಲಿ ಪ್ರತಿಭಾವಂತ ವಿಕಲಚೇತನರನ್ನು ಉನ್ನತ ಶಿಕ್ಷಣ, ವೈದ್ಯಕೀಯ ಶಿಕ್ಷಣ, ತಾಂತ್ರಿಕ ಶಿಕ್ಷಣ ಹಾಗೂ ಔದ್ಯೋಗಿಕ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಿ, ಸದರಿ ವ್ಯಾಸಂಗಕ್ಕೆ ಸರ್ಕಾರವು ವಿಧಿಸುವ ಶುಲ್ಕವನ್ನು ಮರು ಪಾವತಿ ಮಾಡುವುದರ ಮೂಲಕ ವಿಕಲಚೇತನ ವಿದ್ಯಾರ್ಥಿಗಳು ಸಹ ಸಾಮಾನ್ಯ ವಿದ್ಯಾರ್ಥಿಗಳಂತೆ ವಿದ್ಯಾಭ್ಯಾಸ ಮಾಡಲು ಸಹಕರಿಸುವುದು ಸೂಕ್ತವೆಂದು ಅಭಿಪ್ರಾಯ ಪಟ್ಟಿರುವುದಾಗಿ ತಿಳಿಸಿರುತ್ತಾರೆ.

ಮುಂದುವರೆದು, ಅದರಂತೆ 2013-14 ನೇ ಸಾಲಿನಲ್ಲಿ ಎಸ್.ಎಸ್.ಎಲ್.ಸಿ ನಂತರ ಉನ್ನತ ಶಿಕ್ಷಣ, ವೃತ್ತಿ ಶಿಕ್ಷಣ, ತಾಂತ್ರಿಕ ಶಿಕ್ಷಣ ಮತ್ತು ಔದ್ಯೋಗಿಕ ಶಿಕ್ಷಣಗಳಿಗೆ ಆಯ್ಕೆಯಾಗುವ ಅಂದಾಜು 4000 ವಿದ್ಯಾರ್ಥಿಗಳಿಗೆ ಸರ್ಕಾರವು ನಿಗದಿ ಪಡಿಸಿರುವ ಪರೀಕ್ಷಾ ಶುಲ್ಕ, ಬೋಧನಾ ಶುಲ್ಕ, ಪ್ರಯೋಗಾಲಯ ಶುಲ್ಕ, ಕ್ರೀಡಾಶುಲ್ಕ ಹಾಗೂ ಗ್ರಂಥಾಲಯ ಶುಲ್ಕಗಳನ್ನು ಮರುಪಾವತಿಸಲು ರೂ.256.08 ಲಕ್ಷಗಳ ಅನುದಾನದ ಅಗತ್ಯತೆ ಇದ್ದು, ಸದರಿ ಆಯವ್ಯಯವನ್ನು ಲೆಕ್ಕ ಶೀರ್ಷಿಕೆ :2235-02-101-0-05 ಯೋಜನೆ ಉಪಲೆಕ್ಕಶೀರ್ಷಿಕೆ 117 ವಿದ್ಯಾರ್ಥಿವೇತನದಡಿ ಒದಗಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

## ಸರ್ಕಾರದ ಆದೇಶ ಸಂಖ್ಯೆ: ಮಮಇ 271 ಪಿಹೆಚ್‌ಪಿ 2013, ಬೆಂಗಳೂರು

## ದಿನಾಂಕ: 03-09-2013

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ವಿಕಲಚೇತನ ವ್ಯಕ್ತಿಗಳೊಡನೆ ವಿವಾಹ ಏರ್ಪಡುವ ಪ್ರಕರಣಗಳಲ್ಲಿ, ಉನ್ನತ ಶಿಕ್ಷಣ ಪಡೆಯುವ ವಿಕಲಚೇತನರಿಗೆ 2013-14 ನೇ ಸಾಲಿನಲ್ಲಿ ಎಸ್.ಎಸ್.ಎಲ್.ಸಿ ನಂತರ ಉನ್ನತ ಶಿಕ್ಷಣ, ವೃತ್ತಿ ಶಿಕ್ಷಣ, ತಾಂತ್ರಿಕ ಶಿಕ್ಷಣ, ಸ್ನಾತಕೋತ್ತರ ಮತ್ತು ಔದ್ಯೋಗಿಕ ಶಿಕ್ಷಣಗಳಿಗೆ

ನಿಯಮಾನುಸಾರ ಆಯ್ಕೆಯಾಗುವ ವಿದ್ಯಾರ್ಥಿಗಳಿಗೆ ಸರ್ಕಾರವು ನಿಗದಿ ಪಡಿಸಿರುವ ಪರೀಕ್ಷಾ ಶುಲ್ಕ, ಬೋಧನಾ ಶುಲ್ಕ, ಪ್ರಯೋಗಾಲಯ ಶುಲ್ಕ, ಕ್ರೀಡಾ ಶುಲ್ಕ ಹಾಗೂ ಗ್ರಂಥಾಲಯ ಶುಲ್ಕಗಳನ್ನು ಮರುಪಾವತಿಸುವ ಯೋಜನೆಗೆ, ಬೇರೆ ಇಲಾಖೆ ಹಾಗೂ ಇತರೆ ಮೂಲಗಳಿಂದ ಶುಲ್ಕವನ್ನು ಮರು ಪಾವತಿ ಪಡೆದ ವಿದ್ಯಾರ್ಥಿಗಳಿಗೆ ಈ ಯೋಜನೆಯಡಿ ಶುಲ್ಕ ಮರುಪಾವತಿಗೆ ಅವಕಾಶವಿರುವುದಿಲ್ಲವೆಂಬ ಷರತ್ತಿಗೆ ಒಳಪಟ್ಟು ಹಾಗೂ ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ.

ಈ ಯೋಜನೆಗೆ ಸಂಬಂಧಿಸಿದಂತೆ ವಿದ್ಯಾರ್ಥಿಗಳಿಂದ ಅರ್ಜಿ ಸ್ವೀಕರಿಸಿದ ನಂತರ ಅನುದಾನ ಒದಗಿಸುವ ಬಗ್ಗೆ ಪ್ರತ್ಯೇಕ ಪ್ರಸ್ತಾವನೆಯನ್ನು ಸಲ್ಲಿಸತಕ್ಕದ್ದು. ಈ ಯೋಜನೆಯ ಅನುಷ್ಠಾನ ಸಂಬಂಧ ವಿಧಿಸಬಹುದಾದ ಷರತ್ತುಗಳು ಹಾಗೂ ಮಾರ್ಗಸೂಚಿಗಳ ವಿವರಗಳನ್ನು ಅನುಬಂಧ -1 ರಲ್ಲಿ ಹಾಗೂ ಶುಲ್ಕ ಮರುಪಾವತಿಯ ಅರ್ಜಿ ನಮೂನೆಯನ್ನು ಕ್ರಮವಾಗಿ ಅನುಬಂಧ -2 ರಲ್ಲಿ ನೀಡಿದೆ.

ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯು ಉದ್ದೇಶಿತ ಗುಂಪುಗಳಿಗೆ ಈ ಯೋಜನೆ ಕುರಿತಂತೆ ವ್ಯಾಪಕ ಪ್ರಚಾರ ಕೈಗೊಳ್ಳುವುದು ಹಾಗೂ ಇಬ್ಬಗೆಯ ವಹಿ (Duplicity) ತಪ್ಪಿಸಲು ಸೂಕ್ತ ಕ್ರಮ ತೆಗೆದುಕೊಳ್ಳತಕ್ಕದ್ದು.

ಈ ಆದೇಶವನ್ನು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಿ 38 ಪಿಎಂಎಂ 2013, ದಿನಾಂಕ: 17-8-2013 ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ ಆಇ 560 ವೆಚ್ಚ-3 2013, ದಿನಾಂಕ: 31-8-2013ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಬಿ.ಕಮಲಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ.

ಇವರಿಗೆ:

1) ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು
2) ನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ಬೆಂಗಳೂರು.
3) ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಗೋಪುರ, ಬೆಂಗಳೂರು.
4) ಎಲ್ಲಾ ಜಿಲ್ಲಾಧಿಕಾರಿಗಳು. (ನಿರ್ದೇಶಕರ ಮುಖಾಂತರ)
5) ಎಲ್ಲಾ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು,ಜಿಲ್ಲಾ ಪಂಚಾಯತ್. (ನಿರ್ದೇಶಕರ ಮುಖಾಂತರ)
6) ಖಜಾನಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ.
7) ಶಾಖಾ ರಕ್ಷಾ ಕಡತ/ ಹೆಚ್ಚುವರಿ ಪ್ರತಿಗಳು.

ಪ್ರತಿ:

1) ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವೆಚ್ಚ 3), ವಿಧಾನಸೌಧ, ಬೆಂಗಳೂರು,
2) ಆಪ್ತ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಹಾಗೂ ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು.
3) ಆಪ್ತಕಾರ್ಯದರ್ಶಿ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು.

ಸರ್ಕಾರದ ಆದೇಶ ಸಂಖ್ಯೆ: ಮಮಇ 271 ಪಿಹೆಚ್‌ಪಿ 2013, ದಿನಾಂಕ: 3-9-2013 ಕ್ಕೆ ಅನುಬಂಧ-1

## ಷರತ್ತುಗಳು

1. ವಿಕಲಚೇತನರು ಭಾರತದ ಪ್ರಜೆಯಾಗಿದ್ದು, ಅರ್ಜಿ ಸಲ್ಲಿಸುವ ದಿನಾಂಕಕ್ಕೆ ಕನಿಷ್ಠ 5 ವರ್ಷ ಕರ್ನಾಟಕದಲ್ಲಿ ವ್ಯಾಸಂಗ ಮಾಡಿರತಕ್ಕದ್ದು.
2. ಸರ್ಕಾರಿ, ಸ್ಥಳೀಯ ಸಂಸ್ಥೆ, ಅನುದಾನಿತ ಸಂಸ್ಥೆ, ಸರ್ಕಾರದ ಮಾನ್ಯತೆ ಪಡೆದ ಅನುದಾನ ಸಹಿತ ಮತ್ತು ಅನುದಾನ ರಹಿತ ಖಾಸಗಿ ಸಂಸ್ಥೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ಎಸ್.ಎಸ್.ಎಲ್.ಸಿ ನಂತರದ ವಿಕಲಚೇತನ ವಿದ್ಯಾರ್ಥಿಗಳು ಶುಲ್ಕ ಮರು ಪಾವತಿ ಪಡೆಯಲು ಅರ್ಹರಿರುತ್ತಾರೆ.
3. ಯಾವ ಸಂಸ್ಥೆಗಳು ವಿಕಲಚೇತನ ವಿದ್ಯಾರ್ಥಿಗಳಿಂದ ಶುಲ್ಕವನ್ನು ವಿಧಿಸುವುದಿಲ್ಲವೋ ಅಂತಹ ಸಂಸ್ಥೆಯ ವಿದ್ಯಾರ್ಥಿಗಳು ಶುಲ್ಕ ಮರುಪಾವತಿಗೆ ಅರ್ಹರಿರುವುದಿಲ್ಲ.
4. ವಿಕಲಚೇತನರ ವಿದ್ಯಾರ್ಥಿಗಳು ಹಿಂದಿನ ವರ್ಷದ ಪಬ್ಲಿಕ್ ಪರೀಕ್ಷೆಯಲ್ಲಿ ಎಲ್ಲಾ ವಿಷಯಗಳಲ್ಲಿ ಉತ್ತೀರ್ಣರಾಗದಿದ್ದಲ್ಲಿ ಮುಂದಿನ ವರ್ಷದಲ್ಲಿ ಶುಲ್ಕ ಮರುಪಾವತಿಗೆ ಅರ್ಹರಾಗುವುದಿಲ್ಲ. ಆದರೆ, ಮುಂದಿನ ಶೈಕ್ಷಣಿಕ ವರ್ಷದಲ್ಲಿ ಹಿಂದಿನ ಬಾಕಿ ವಿಷಯಗಳು ಸೇರಿದಂತೆ ಎಲ್ಲಾ ವಿಷಯಗಳಲ್ಲಿ ಉತ್ತೀರ್ಣರಾಗಿದ್ದಲ್ಲಿ ಮಾತ್ರ ನಂತರದ ವರ್ಷದಲ್ಲಿ ಶುಲ್ಕ ಮರುಪಾವತಿಗೆ ಅರ್ಹರಾಗುತ್ತಾರೆ. ಆ. ಕೋರ್ಸ್‌ಗಳಲ್ಲಿ ಕ್ಯಾರಿ ಓವರ್ ಪದ್ಧತಿ ಜಾರಿಯಿದ್ದು ಮುಂದಿನ ತರಗತಿಗೆ/ವರ್ಷಕ್ಕೆ ಪ್ರವೇಶ ಅವಕಾಶವಿದ್ದಲ್ಲಿ ಅಂತಹವರು ಶುಲ್ಕ ಮರುಪಾವತಿಗೆ ಅರ್ಹರಿರುತ್ತಾರೆ.
5. ಪರೀಕ್ಷಾ ಶುಲ್ಕವನ್ನು ವರ್ಷಕ್ಕೆ ಒಂದು ಸಲ ಮಾತ್ರ ಮರುಪಾವತಿಸಲಾಗುವುದು. ಅನುತ್ತೀರ್ಣರಾದ ಅಭ್ಯರ್ಥಿಗಳು ಹಾಗೂ ಸಪ್ಲಿಮೆಂಟರಿ ಪರೀಕ್ಷೆ ತೆಗೆದುಕೊಳ್ಳುವ ಅಭ್ಯರ್ಥಿಗಳು ಶುಲ್ಕ ಮರುಪಾವತಿಗೆ ಅರ್ಹರಾಗುವುದಿಲ್ಲ.
6. ಬೇರೆ ಇಲಾಖೆ ಹಾಗೂ ಇತರೆ ಮೂಲಗಳಿಂದ ಶುಲ್ಕವನ್ನು ಪಡೆದ ವಿದ್ಯಾರ್ಥಿಗಳಿಗೆ ಈ ಯೋಜನೆಯಡಿ ಶುಲ್ಕ ಮರುಪಾವತಿಗೆ ಅವಕಾಶವಿರುವುದಿಲ್ಲ.
7. ಯೋಜನೆಯಡಿ ಸೌಲಭ್ಯ ಪಡೆಯುವ ವಿದ್ಯಾರ್ಥಿಗಳಿಗೆ ಯಾವುದೇ ಆದಾಯ ಮಿತಿ ಇರುವುದಿಲ್ಲ.
8. ಸರ್ಕಾರ ಅನುಬಂಧ-1 ರಂತೆ ನಿಗದಿಪಡಿಸಿರುವ ಮೊತ್ತ, ಇದರಲ್ಲಿ ಯಾವುದು ಗರಿಷ್ಠ ಮೊತ್ತಕ್ಕೆ ವಿವಿಧ ಕೋರ್ಸ್‌ಗಳಿಗೆ ಸೀಮಿತಗೊಳಿಸಬಹುದಾಗಿದೆ.
9. ಕಾಲೇಜಿನ ಪ್ರಾಂಶುಪಾಲರು/ಮುಖ್ಯಸ್ಥರ ಮೂಲಕ ಕೋರಿಕೆ ಅರ್ಜಿಯನ್ನು ಅವರ ಶಿಫಾರಸ್ಸಿನೊಂದಿಗೆ ಸಲ್ಲಿಸತಕ್ಕದ್ದು.
10. ಶುಲ್ಕವನ್ನು ಮರುಪಾವತಿ ಮಾಡುವ ಪ್ರಾಧಿಕಾರವು ಆಯಾ ಜಿಲ್ಲೆಯ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳದ್ದಾಗಿರುತ್ತದೆ.
11. ಫಲಾನುಭವಿಗಳ ಹೆಸರಿನ ಬ್ಯಾಂಕ್ ಖಾತೆಗೆ ನೇರವಾಗಿ IFSC/NEFT ಮೂಲಕ ಮರುಪಾವತಿ ಶುಲ್ಕವನ್ನು ವರ್ಗಾವಣೆ ಮಾಡತಕ್ಕದ್ದು. ಅನುಷ್ಠಾನಗೊಳಿಸಲು ಸಾಧ್ಯವಾಗದ ಪಕ್ಷದಲ್ಲಿ ಮಾತ್ರ ಇಲಾಖಾ ನಿರ್ದೇಶಕರ ಪೂರ್ವಾನುಮತಿಯೊಡನೆ ಚೆಕ್ ಮೂಲಕ ವಿತರಿಸಬಹುದು.
12. ವಿದ್ಯಾರ್ಥಿಯು ವ್ಯಾಸಂಗ ಮಾಡುವ ಅವಧಿಯಲ್ಲಿ 2ನೇ ವರ್ಷದಿಂದ ನೀಡುವಾಗ ಹಿಂದಿನ ವರ್ಷದಲ್ಲಿ ಕನಿಷ್ಠ ಶೇ.80ರಷ್ಟು ಹಾಜರಾತಿ ಹೊಂದಿರಬೇಕು.
13. ಅಂಗವಿಕಲರ ಅಧಿನಿಯಮದಲ್ಲಿ ಸೂಚಿಸಿರುವ ಹಾಗೂ ವೈದ್ಯಕೀಯ ಮಂಡಳಿಯವರು ಶಿಫಾರಸ್ಸು ಮಾಡಿರುವ ವೈದ್ಯಕೀಯ ಪ್ರಮಾಣದಲ್ಲಿ ಸೂಚಿಸಿರುವ ವಿಕಲಚೇತನ ಅಭ್ಯರ್ಥಿಗಳು ಮಾತ್ರ ಯೋಜನೆಗೆ ಅರ್ಹರಿರುತ್ತಾರೆ.

(ಬಿ.ಕಮಲಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ.

ಸರ್ಕಾರದ ಆದೇಶ ಸಂಖ್ಯೆ: ಮಮಇ 271 ಪಿಹೆಚ್‌ಪಿ 2013, ದಿನಾಂಕ: 3-9-2013 ಕ್ಕೆ ಅನುಬಂಧ-2

ಕರ್ನಾಟಕ ಸರ್ಕಾರ

ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಬೆಂಗಳೂರು.

ವಿಕಲಚೇತನರ ಶುಲ್ಕ ಮರುಪಾವತಿ ಮಂಜೂರಾತಿಗಾಗಿ ಅರ್ಜಿ

ಕಾಲೇಜಿನ ಪ್ರಾಂಶುಪಾಲರು ದೃಢೀಕರಿಸಿದ ಇತ್ತೀಚಿನ ಭಾವಚಿತ್ರ

ವರ್ಷ:20 -20 ಕೋರ್ಸ್:

| | | |
|---|---|---|
| 1 | ವಿದ್ಯಾರ್ಥಿಯ ಹೆಸರು | |
| 2 | ಲಿಂಗ | ಗಂಡು/ಹೆಣ್ಣು |
| 3 | ಹುಟ್ಟಿದ ದಿನಾಂಕ | |
| 4 | ತಂದೆ/ತಾಯಿ/ಪೋಷಕರ ಹೆಸರು | |
| 5 | ಅಂಚೆ ವಿಳಾಸ | ಗ್ರಾಮ/ಬೀದಿ<br>ತಾಲ್ಲೂಕು: ಜಿಲ್ಲೆ:<br>ಪಿನ್ |
| 6 | ಖಾಯಂ ವಿಳಾಸ | ಗ್ರಾಮ/ಬೀದಿ<br>ತಾಲ್ಲೂಕು: ಜಿಲ್ಲೆ:<br>ಪಿನ್ |
| 7 | ವ್ಯಾಸಂಗ ಮಾಡುತ್ತಿರುವ ಕಾಲೇಜಿನ ಹೆಸರು ಮತ್ತು ಪೂರ್ಣ ವಿಳಾಸ | ತಾಲ್ಲೂಕು: ಜಿಲ್ಲೆ:<br>ಪಿನ್ |
| 8 | ಹಾಲಿ ವ್ಯಾಸಂಗ ಮಾಡುತ್ತಿರುವ ಕೋರ್ಸ್ | ಕೋರ್ಸ್: ತರಗತಿ: |
| 9 | ಪ್ರಸಕ್ತ ಸಾಲಿನಲ್ಲಿ ಕಾಲೇಜಿಗೆ ಪ್ರವೇಶ ಪಡೆದ ದಿನಾಂಕ | |
| 11 | ವಿಕಲಚೇತನರ ಸ್ವರೂಪ/ಪ್ರಮಾಣ, ದೃಢೀಕೃತ ಗುರುತಿನ ಚೀಟಿ ಲಗತ್ತಿಸುವುದು. | |
| 12 | ಹಿಂದಿನ ವರ್ಷ ಶುಲ್ಕ ಮರುಪಾವತಿ ಮಂಜೂರಾಗಿದೆಯೇ? ಆಗಿದ್ದಲ್ಲಿ ಎಷ್ಟು? | ಹೌದು/ಇಲ್ಲ<br>ರೂ. |
| 13 | ವಿದ್ಯಾರ್ಥಿಯು ಹಿಂದಿನ ವರ್ಷ/ತರಗತಿಯಲ್ಲಿ ತೇರ್ಗಡೆಯಾಗಿದ್ದಾನೆಯೇ? (ಹಿಂದಿನ ತರಗತಿ/ವರ್ಷದ ಅಂಕಪಟ್ಟಿ ಲಗತ್ತಿಸಬೇಕು) | ಹೌದು/ಇಲ್ಲ<br>ಗರಿಷ್ಠ ಅಂಕ: ಪಡೆದ ಅಂಕ: ಶೇ: |
| 14 | ಕರ್ನಾಟಕದಲ್ಲಿ ಎಷ್ಟು ವರ್ಷಗಳಿಂದ ವಾಸವಾಗಿರುತ್ತಾರೆ? | |
| 15 | ವಿದ್ಯಾರ್ಥಿಯು ಕಳೆದ 03 ವರ್ಷಗಳಲ್ಲಿ ವ್ಯಾಸಂಗ ಮಾಡಿದ ಕಾಲೇಜುಗಳ ವಿವರಗಳು. | |

| ಕ್ರಸಂ | ಕಾಲೇಜಿನ ಹೆಸರು ಮತ್ತು ಪೂರ್ಣ ವಿಳಾಸ | ತರಗತಿ | ವ್ಯಾಸಂಗ ಮಾಡಿದ ಅವಧಿ | |
|---|---|---|---|---|
| | | | ರಿಂದ | ವರೆಗೆ |
| | | | | |

| | | |
|---|---|---|
| 16 | ವಿದ್ಯಾರ್ಥಿಯು ಕಾಲೇಜಿಗೆ ಪಾವತಿ ಮಾಡಬೇಕಾದ ಶುಲ್ಕಗಳು<br>ಪರೀಕ್ಷಾ ಶುಲ್ಕ:<br>ಬೋಧನಾ ಶುಲ್ಕ:<br>ಪ್ರಯೋಗಾಲಯ ಶುಲ್ಕ:<br>ಪ್ರವೇಶ ಶುಲ್ಕ:<br>ಗ್ರಂಥಾಲಯ ಶುಲ್ಕ:<br>ಒಟ್ಟು ರೂ. | ರೂ.<br>ರೂ.<br>ರೂ.<br>ರೂ.<br>ರೂ |
| 17 | ವಿದ್ಯಾರ್ಥಿಯ ಬ್ಯಾಂಕ್ ಖಾತೆ ಸಂಖ್ಯೆ | |
| 18 | ಷೆಡ್ಯೂಲ್ ಬ್ಯಾಂಕಿನ ಹೆಸರು | |
| 19 | ಬ್ಯಾಂಕ್ ಶಾಖೆಯ ಹೆಸರು | |
| 20 | ಬ್ಯಾಂಕಿನ NEFT ಕೋಡ್ ಅಥವಾ<br>IFSC: ಕೋಡ್: | NEFT ಕೋಡ್:<br>IFSC: ಕೋಡ್: |
| 21 | ಯಾವುದೇ ಮೂಲದಿಂದ / ಇಲಾಖೆಗಳಿಂದ ಶುಲ್ಕ ಮರುಪಾವತಿ ಪಡೆದಿದ್ದಲ್ಲಿ ವಿವರಗಳು | |

**ಘೋಷಣೆ:**

ಶ್ರೀಮತಿ/ಶ್ರೀ______________________________

ತಂದೆ/ತಾಯಿ/ಪೋಷಕರು_____________________________________________ಆದ ನಾನು/ನಾವು ಪ್ರಮಾಣೀಕರಿಸುವುದೇನೆಂದರೆ, ಮೇಲಿನ ವಿಷಯಗಳು ನನಗೆ ತಿಳಿದ ಮಟ್ಟಿಗೆ ಸತ್ಯವಾಗಿರುತ್ತದೆ. ಒಂದು ವೇಳೆ ಮೇಲೆ ತಿಳಿಸಿರುವ ಮಾಹಿತಿಯು ಸುಳ್ಳು ಎಂದು ಕಂಡು ಬಂದಲ್ಲಿ ಕಾನೂನು ರೀತ್ಯಾ ಕ್ರಮ ಜರುಗಿಸಬಹುದು ಎಂಬುದಾಗಿ ಹಾಗೂ ನಾನು ಬೇರೆ ಯಾವುದೇ ಮೂಲದಿಂದ ಈ ಮೇಲಿನ ವರ್ಷಕ್ಕೆ ಸಂಬಂಧಿಸಿದಂತೆ ನಿಗಧಿತ ಶುಲ್ಕಗಳ ಮರುಪಾವತಿ ಪಡೆದಿಲ್ಲ/ಪಡೆಯಲು ಅರ್ಜಿ ಸಲ್ಲಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ:________

ಸಹಿ:
(ತಂದೆ/ತಾಯಿ/ಪೋಷಕರ)

ವಿದ್ಯಾರ್ಥಿಯ ಹೆಸರು:

ಸಹಿ:
ಹೆಸರು

ಸೂಚನೆ

ಅರ್ಜಿಯನ್ನು ವಿದ್ಯಾರ್ಥಿಯು ಆಯಾ ಕಾಲೇಜಿನ ಪ್ರಾಂಶುಪಾಲರಿಗೆ ದೃಢೀಕರಿಸಿದ ಅಂಕಪಟ್ಟಿ ಮತ್ತು ವಿಕಲಚೇತನರ ಗುರುತಿನ ಚೀಟಿಯೊಂದಿಗೆ ಸಲ್ಲಿಸಬೇಕು.
ಪ್ರಸ್ತುತ ತರಗತಿಯಲ್ಲಿ ಕನಿಷ್ಠ ಶೇ.80 ರಷ್ಟು ಹಾಜರಾತಿ ಹೊಂದಿರಬೇಕು.
ಶುಲ್ಕ ಮರುಪಾವತಿಯನ್ನು ವಿದ್ಯಾರ್ಥಿಯ ಬ್ಯಾಂಕ್ ಖಾತೆಗೆ ಜಮಾ ಮಾಡುವ ಕಾರಣ, ತಮ್ಮ ಬ್ಯಾಂಕ್ ಖಾತೆಯ NEFT/ IFSC: ಕೋಡ್ ವಿವರಗಳನ್ನು ಕಡ್ಡಾಯವಾಗಿ ತಪ್ಪಿಲ್ಲದಂತೆ ನಮೂದಿಸಬೇಕು.

ಭಾಗ–2

## ಕಾಲೇಜು ಕಛೇರಿಯ ಉಪಯೋಗಕ್ಕೆ

### ಘೋಷಣೆ:

ಶ್ರೀಮತಿ/ಶ್ರೀ ______________ ತಂದೆ/ತಾಯಿ/ಪೋಷಕರು______________ ಆದ ಇವರು ______________ ಕೋರ್ಸ್‌ಯಲ್ಲಿ __________ ಇವರು ವ್ಯಾಸಂಗ ಮಾಡುತ್ತಿದ್ದು, ಇವರ ಶುಲ್ಕದ ವಿವರಗಳು ಈ ಕೆಳಕಂಡಂತೆ ಇರುತ್ತದೆ.

| | |
|---|---|
| ಭಾಗ–1 ರಲ್ಲಿ ನಮೂದಿಸಿರುವ ವಿವರಗಳಲ್ಲಿ ವ್ಯತ್ಯಾಸಗಳಿದ್ದಲ್ಲಿ ನಮೂದಿಸಬೇಕು<br>1. ಅಂಕಪಟ್ಟಿ : ಸರಿ ಇದೆ/ಇಲ್ಲ.<br>2. ಗುರುತಿನ ಚೀಟಿ : ಸರಿ ಇದೆ/ಇಲ್ಲ | ಇತರೆ |
| ಕಳೆದ ವರ್ಷದ ಹಾಜರಾತಿ ವಿವರ | ಶೇಕಡ: |
| ಮಂಜೂರು ಮಾಡಬಹುದಾದ ಒಟ್ಟು ಶುಲ್ಕ | ಪರೀಕ್ಷಾ ಶುಲ್ಕ: ರೂ.<br>ಬೋಧನಾ ಶುಲ್ಕ: ರೂ.<br>ಪ್ರಯೋಗಾಲಯ ಶುಲ್ಕ: ರೂ.<br>ಪ್ರವೇಶ ಶುಲ್ಕ: ರೂ.<br>ಗ್ರಂಥಾಲಯ ಶುಲ್ಕ ರೂ |
| | ಒಟ್ಟು: |

ಮೇಲ್ಕಂಡ ಮಾಹಿತಿಗಳು ಕಾಲೇಜಿನಲ್ಲಿ ನಿರ್ವಹಿಸಿರುವ ದಾಖಲೆಗಳ ಆಧಾರದ ಮೇಲೆ ಪರಿಶೀಲಿಸಲಾಗಿದ್ದು, ಕ್ರಮಬದ್ಧವಾಗಿರುತ್ತದೆ ಎಂದು ದೃಢೀಕರಿಸಿದೆ. ಹಾಗೂ ರೂ ಮೇಲ್ಕಂಡ ಶುಲ್ಕಗಳನ್ನು ವಿದ್ಯಾರ್ಥಿಗೆ ಮರುಪಾವತಿ ಮಾಡಬಹುದೆಂದು ಶಿಫಾರಸ್ಸು ಮಾಡಲಾಗಿದೆ. ಬೇರೆ ಯಾವುದೇ ಮೂಲದಿಂದ ಈ ವಿದ್ಯಾರ್ಥಿಗೆ ಈ ಮೇಲಿನ ವರ್ಷಕ್ಕೆ ಈ ಮೇಲಿನ ಶುಲ್ಕಗಳನ್ನು ಪಾವತಿಸಿಲ್ಲ/ ಪಾವತಿಸಲು ಶಿಫಾರಸ್ಸು ಮಾಡಿಲ್ಲವೆಂದು ಘೋಷಿಸುತ್ತೇನೆ.

ದಿನಾಂಕ:

ಸಹಿ:
(ಪ್ರಾಂಶುಪಾಲರು)
(ಸಂಸ್ಥೆಯ ಮೊಹರು)

ಲಗತ್ತು: ಶುಲ್ಕ ಪಾವತಿ ರಸೀತಿಯ ಮೂಲಪತ್ರಿ ಮತ್ತು ಒಂದು ನಕಲು ಪ್ರತಿ

ಸೂಚನೆ: ಶಿಕ್ಷಣ ಸಂಸ್ಥೆಯ ಮುಖ್ಯಸ್ಥರು ಭಾಗ–1 ರ ವಿವರಗಳನ್ನು ಪರಿಶೀಲಿಸಿ ಭಾಗ–2 ರಲ್ಲಿ ವಿದ್ಯಾರ್ಥಿ ವಿವರಗಳನ್ನು ದೃಢೀಕರಿಸಬೇಕು, ನಂತರ ಅನುಬಂಧ–2 ರಲ್ಲಿನ ನಮೂನೆಯಲ್ಲಿ ವಿವರಗಳನ್ನು ಶಿಕ್ಷಣ ಸಂಸ್ಥೆ ವ್ಯಾಪ್ತಿಯ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು /ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರಿಗೆ ನಿಗಧಿಪಡಿಸಿ ದಿನಾಂಕದೊಳಗಾಗಿ ಸಲ್ಲಿಸಬೇಕು.

(ಬಿ.ಕಮಲಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ.

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: "ಸ್ಪರ್ಧಾ ಚೇತನ" ಯೋಜನೆಯಡಿ ವಿಶೇಷ ಸಾಮರ್ಥ್ಯ/ ಭಿನ್ನ ಸಾಮರ್ಥ್ಯದ ವಿದ್ಯಾವಂತ ವ್ಯಕ್ತಿಗಳಿಗೆ ಐ.ಎ.ಎಸ್./ಕೆ.ಎ.ಎಸ್. ಇತರ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತರಬೇತಿ ನೀಡುವ ಯೋಜನೆಗೆ ಆಡಳಿತಾತ್ಮಕ ಮಂಜೂರಾತಿ ನೀಡುವ ಕುರಿತು

ಓದಲಾಗಿದೆ: ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆರವರ ಏಕಕಡತ ಸಂಖ್ಯೆ: ಇಸಿ/ಹೊ.ಯೋ/07/ಸ್ಪ.ಚೇ./2016-17

ಪ್ರಸ್ತಾವನೆ:

2016-17ನೇ ಸಾಲಿನ ಆಯವ್ಯಯ ಭಾಷಣದ ಕ್ರಮ ಸಂಖ್ಯೆ:157ರಲ್ಲಿ "ಸ್ಪರ್ಧಾ ಚೇತನ" ಯೋಜನೆಯಡಿ ವಿಶೇಷ ಸಾಮರ್ಥ್ಯ/ಭಿನ್ನ ಸಾಮರ್ಥ್ಯದ ವಿದ್ಯಾವಂತ ವ್ಯಕ್ತಿಗಳಿಗೆ ಐ.ಎ.ಎಸ್./ಕೆ.ಎ.ಎಸ್. ಇತರ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತರಬೇತಿ ನೀಡಲಾಗುವುದು. ಇದಕ್ಕಾಗಿ ರೂ. 1.00 ಕೋಟಿಗಳ ಸಹಾಯಧನವನ್ನು ಒದಗಿಸಲಾಗುವುದೆಂದು ಘೋಷಿಸಲಾಗಿದೆ. ರಾಜ್ಯದಲ್ಲಿ 2011ರ ಜನಗಣತಿ ಪ್ರಕಾರ 13,24,205 ಅಂಗವಿಕಲರಿದ್ದು, ಇವರಲ್ಲಿ 18 ವರ್ಷದಿಂದ 49 ವರ್ಷದೊಳಗಿನ ಅಂಗವಿಕಲರು 3,31,191 ಸಂಖ್ಯೆಯಲ್ಲಿರುತ್ತಾರೆ. ಅಂಗವಿಕಲ ವ್ಯಕ್ತಿಗಳ ಅಧಿನಿಯಮ 1995 ಹಾಗೂ ರಾಜ್ಯ ಅಂಗವಿಕಲರ ನೀತಿ 1996ರಂತೆ ಅಂಗವಿಕಲರಿಗೆ ಸಮಾನ ಅವಕಾಶ ಸಂಪೂರ್ಣ ಭಾಗವಹಿಸುವಿಕೆಗೆ ಉತ್ತೇಜನ ನೀಡುವುದು ಅವಶ್ಯಕವಾಗಿದ್ದು, ಅಂಗವಿಕಲರಿಗೆ ಉದ್ಯೋಗದಲ್ಲಿ ಸಮೂಹ 'ಸಿ' ಮತ್ತು 'ಡಿ' ಹುದ್ದೆಗಳಲ್ಲಿ ಶೇ.5ರಷ್ಟು ಹಾಗೂ ಸಮೂಹ 'ಎ' ಮತ್ತು 'ಬಿ' ವೃಂದದ ಹುದ್ದೆಗಳಲ್ಲಿ ಶೇ.3ರಷ್ಟು ಮೀಸಲಾತಿ ನೀಡಿದೆ. ಈ ಹಿನ್ನೆಲೆಯಲ್ಲಿ ಸರ್ಕಾರವು ಇತರ ವರ್ಗದವರಿಗೆ ಅವಕಾಶ ಪಡೆಯಲು ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಅವರಿಗೆ ತರಬೇತಿ ನೀಡುವುದು ಅವಶ್ಯಕವಾಗಿರುತ್ತದೆಂದು ತಿಳಿಸುತ್ತಾ ಯೋಜನೆಯ ರೂಪುರೇಶೆ ಹಾಗೂ ಮಾರ್ಗಸೂಚಿಯನ್ನು ರೂಪಿಸಿ ತಡೆಪಟ್ಟಿಯೊಂದಿಗೆ ಸಲ್ಲಿಸಿರುತ್ತಾರೆ.

ಸದರಿ ಯೋಜನೆಗೆ 2016-17ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ:2235-02-101-0-55 ಯೋಜನೆಯಡಿ ಒದಗಿಸಿರುವ ಆಯವ್ಯಯ ರೂ. 250.00 ಲಕ್ಷಗಳಲ್ಲಿ ರೂ. 100.00 ಲಕ್ಷಗಳ ವೆಚ್ಚ ಭರಿಸಲು ಅನುಮತಿ ಹಾಗೂ ಯೋಜನೆಯ ಅನುಷ್ಠಾನಕ್ಕಾಗಿ ಆಡಳಿತಾತ್ಮಕ ಮಂಜೂರಾತಿ ನೀಡುವಂತೆ ಮೇಲೆ ಓದಲಾದ ಏಕಕಡತದಲ್ಲಿ ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರು ಕೋರಿರುತ್ತಾರೆ.

ಮೇಲಿನ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 124 ಪಿಹೆಚ್‌ಪಿ 2016, ಬೆಂಗಳೂರು, ದಿನಾಂಕ:16.05.2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2016-17ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿರುವಂತೆ "ಸ್ಪರ್ಧಾ ಚೇತನ" ಯೋಜನೆಯಡಿ ವಿಶೇಷ ಸಾಮರ್ಥ್ಯ/ ಭಿನ್ನ ಸಾಮರ್ಥ್ಯದ ವಿದ್ಯಾವಂತ ವ್ಯಕ್ತಿಗಳಿಗೆ ಐ.ಎ.ಎಸ್./ಕೆ.ಎ.ಎಸ್. ಇತರ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತರಬೇತಿ ನೀಡುವ ಯೋಜನೆಗೆ ಆಡಳಿತಾತ್ಮಕ ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2016-17ನೇ ಸಾಲಿನ ಲೆಕ್ಕ ಶೀರ್ಷಿಕೆ:2235-02-101-0-55 ಯೋಜನೆಯಡಿ ಒದಗಿಸಿರುವ ಆಯವ್ಯಯದಲ್ಲಿ ಭರಿಸತಕ್ಕದ್ದು.

ಆದೇಶವನ್ನು ಕ್ರಮವಾಗಿ ಆರ್ಥಿಕ ಇಲಾಖೆ, ಯೋಜನಾ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ 278 ವೆಚ್ಚ-3 2016, ದಿ:27.04.2016 ಮತ್ತು ಪಿಡಿ 33 ಐಎಂಎಂ 2016, ದಿ:06.05.2016ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ

16|5|2016
(ಜಯಲಕ್ಷ್ಮಿ)
ಸರ್ಕಾರದ ಅಧೀನ ಕಾರ್ಯದರ್ಶಿ-2
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ.

ಇವರಿಗೆ:

1. ಪ್ರಧಾನ ಮಹಾಲೇಖಪಾಲರು(ಜಿ& ಎಸ್ ಎಸ್ ಎ), ಕರ್ನಾಟಕ, ಹೊಸ ಕಟ್ಟಡ, ಆಡಿಟ್ ಭವನ", ಅಂಚೆ ಪೆಟ್ಟಿಗೆ ಸಂಖ್ಯೆ: 5398, ಬೆಂಗಳೂರು-560001.
2. ಪ್ರಧಾನ ಮಹಾಲೇಖಪಾಲರು(ಇ & ಆರ್ ಎಸ್ ಎ), ಕರ್ನಾಟಕ, ಹೊಸ ಕಟ್ಟಡ, ಆಡಿಟ್ ಭವನ", ಅಂಚೆ ಪೆಟ್ಟಿಗೆ ಸಂಖ್ಯೆ: 5398, ಬೆಂಗಳೂರು-560001.
3. ಪ್ರಧಾನ ಮಹಾಲೇಖಪಾಲರು(ಎ&ಇ), ಕರ್ನಾಟಕ, ಹೊಸ ಕಟ್ಟಡ, ಆಡಿಟ್ ಭವನ",ಅಂಚೆ ಪೆಟ್ಟಿಗೆ ಸಂಖ್ಯೆ: 5329, ಬೆಂಗಳೂರು-560001
4. ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ವಿ.ವಿ.ಗೋಪುರ, ಬೆಂಗಳೂರು.
5. ಆಯುಕ್ತರು, ರಾಜ್ಯ ಅಂಗವಿಕಲ ವ್ಯಕ್ತಿಗಳ ಅಧಿನಿಯಮದ ಕಛೇರಿ ಕರ್ನಾಟಕ, ನಂ.55, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯ ಕಟ್ಟಡ,ಅಭಯ ಸಂಕೀರ್ಣ,2ನೇ ಮಹಡಿ,ರಿಸಲ್ದಾರ್ ರಸ್ತೆ, ಶೇಷಾದ್ರಿ ಪುರಂ.ಬೆಂಗಳೂರು.
6. ಆಂತರಿಕ ಆರ್ಥಿಕ ಸಲಹೆಗಾರರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ವಿಕಾಸಸೌಧ, ಬೆಂಗಳೂರು.
7. ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ ವೆಚ್ಚ(3 & 9), ವಿಧಾನ ಸೌಧ, ಬೆಂಗಳೂರು
8. ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನಸೌಧ, ಬೆಂಗಳೂರು.
9. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರ ಆಪ್ತ ಕಾರ್ಯದರ್ಶಿ, ಬಹುಮಹಡಿ ಕಟ್ಟಡ, ಬೆಂಗಳೂರು.
10. ಸರ್ಕಾರದ ಉಪ ಕಾರ್ಯದರ್ಶಿಗಳು, ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರ ಆಪ್ತ ಸಹಾಯಕರು, ಬಹುಮಹಡಿ ಕಟ್ಟಡ, ಬೆಂಗಳೂರು.
11. ಶಾಖಾಧಿಕಾರಿ, ಸ್ವೀಕೃತಿ ಮತ್ತು ರವಾನೆ ಶಾಖೆ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು.
12. ಶಾಖಾ ರಕ್ಷಾ ಕಡತ/ ಒಡಿಪಿಸಿ/ ಹೆಚ್ಚುವರಿ ಪ್ರತಿಗಳು.

## ಸರ್ಕಾರದ ಆದೇಶ ಸಂಖ್ಯೆ: ಮಮಇ 124 ಪಿಹೆಚ್‌ಪಿ 2016, ದಿ:16.05.2016ಕ್ಕೆ

## ಅನುಬಂಧ – 01

**ಸ್ಪರ್ಧಾ ಚೇತನ: (ವಿದ್ಯಾವಂತ ನಿರುದ್ಯೋಗಿ ಅಂಗವಿಕಲರಿಗೆ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತರಬೇತಿ ಪಡೆಯಲು ಸಹಾಯ ಧನ ನೀಡುವ ಯೋಜನೆ) ಅನುಷ್ಠಾನಗೊಳಿಸುವ ಸಂಬಂಧ ಇರಬೇಕಾದ ಅರ್ಹತಾ ಮಾನದಂಡಗಳು**

- ವಿದ್ಯಾವಂತ ನಿರುದ್ಯೋಗಿ ಅಂಗವಿಕಲರಿಗೆ ಗುಣಾತ್ಮಕ ತರಬೇತಿಯನ್ನು ನೀಡಿ ಅವರನ್ನು ಸಾಮಾನ್ಯರಂತೆ ಉನ್ನತ ಹುದ್ದೆಗಳನ್ನು ಪಡೆಯಲು ಅವಕಾಶ ನೀಡಿ ಅವರನ್ನು ಸಮಾಜದ ಮುಖ್ಯ ವಾಹಿನಿಗೆ ಕರೆದೊಯ್ಯುವುದು.
- ಕೇಂದ್ರ ಲೋಕ ಸೇವಾ ಆಯೋಗದಿಂದ (UPSC) ನಡೆಸುವ ಗ್ರೂಪ್ ಎ ಮತ್ತು ಬಿ ವೃಂದದ ಪರೀಕ್ಷೆಗಳಿಗೆ ತರಬೇತಿ ಪಡೆಯಲು ಸಹಾಯಧನ ನೀಡುವುದು.
- ಕರ್ನಾಟಕ ಲೋಕ ಸೇವಾ ಆಯೋಗದಿಂದ (KPSC) ನಡೆಸುವ ಗ್ರೂಪ್ ಎ ಮತ್ತು ಬಿ ವೃಂದದ ಪರೀಕ್ಷೆಗಳಿಗೆ ತರಬೇತಿ ಪಡೆಯಲು ಸಹಾಯಧನ ನೀಡುವುದು.
- ಬ್ಯಾಂಕ್/ಜೀವ ವಿಮಾ ನಿಗಮ/ ಸರ್ಕಾರಿ ಸಾಮ್ಯದ ಉದ್ದಿಮೆಗಳು ಮತ್ತು ಇತರೆ ಸಂಸ್ಥೆಗಳು ನಡೆಸುವ ಅಧಿಕಾರಿ/ಪ್ರಥಮ ದರ್ಜೆ/ದ್ವಿತೀಯ ದರ್ಜೆ ಹುದ್ದೆಗಳಿಗೆ ನಡೆಸುವ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತರಬೇತಿ ಪಡೆಯಲು ಸಹಾಯ ಧನ ನೀಡುವುದು.

**ಅನುಷ್ಠಾನಗೊಳಿಸುವ ಸಂಸ್ಥೆಗಳು:**

1. ರಾಜ್ಯ ಸರ್ಕಾರದ ಇತರೆ ಇಲಾಖೆಗಳಡಿ ಗುರುತಿಸಲ್ಪಟ್ಟಂತಹ ಪೂರ್ವಪರೀಕ್ಷಾ ತರಬೇತಿ ಕೇಂದ್ರಗಳು (Pre Examination Training Centers)
2. ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯಡಿ ಗುರುತಿಸಲ್ಪಟ್ಟ ಖಾಸಗಿ/ ಅನುದಾನಿತ ಸ್ವಯಂ ಸೇವಾ ಸಂಸ್ಥೆಗಳು ನಡೆಸುತ್ತಿರುವ ತರಬೇತಿ ಕೇಂದ್ರಗಳು.

**ಅನುದಾನದ ವಿಧಾನ:**

1. ಸದರಿ ಯೋಜನೆಗೆ ರಾಜ್ಯ ಸರ್ಕಾರವು ಅನುದಾನವನ್ನು ಒದಗಿಸುತ್ತದೆ.
2. ತರಬೇತಿಗೆ ನಿಗದಿಗೊಳಿಸುವ ಶುಲ್ಕ ಮತ್ತು ಇತರೆ ಖರ್ಚುಗಳನ್ನೊಳಗೊಂಡಂತೆ ಸಹಾಯಧನವನ್ನು ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಯು ಪಡೆಯುತ್ತಿರುವ ತರಬೇತಿ ಕೇಂದ್ರಕ್ಕೆ ನೀಡಲಾಗುವುದು.

**ತರಬೇತಿ ಪಡೆಯಲು ಅರ್ಜಿದಾರರ ಅರ್ಹತೆ:**

(1) ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಯು ಶೇ. 40 ಕ್ಕಿಂತ ಹೆಚ್ಚಿನ ಅಂಗವಿಕಲತೆ ಹೊಂದಿರಬೇಕು

(2) ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಯು ಕನಿಷ್ಠ 18 ವರ್ಷದಿಂದ ನೇಮಕಾತಿ ಪ್ರಾಧಿಕಾರಗಳು ಹೊರಡಿಸುವ ಅಧಿಸೂಚನೆಯಲ್ಲಿ ನಿಗದಿಗೊಳಿಸಿರುವ ಗರಿಷ್ಠ ವಯೋಮಿತಿಯೊಳಗಿರಬೇಕು.

(3) ಕರ್ನಾಟಕದಲ್ಲಿ ಕನಿಷ್ಠ 10 ವರ್ಷಗಳಿಂದ ವಾಸವಾಗಿರತಕ್ಕದ್ದು.

(4) ಆದಾಯ ಮಿತಿ ಇರುವುದಿಲ್ಲ.

(5) ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಯು ಪಿ.ಯು.ಸಿ ನಂತರದ ವ್ಯಾಸಂಗವನ್ನು ಹೊಂದಿರಬೇಕು ಹಾಗೂ ನೇಮಕಾತಿ ಪ್ರಾಧಿಕಾರಗಳು ಹುದ್ದೆಗಳಿಗೆ ಹೊರಡಿಸುವ ಅಧಿಸೂಚನೆಯಂತೆ ಶೈಕ್ಷಣಿಕ ಅರ್ಹತೆಯನ್ನು ಹೊಂದಿರಬೇಕು.

(6) ಈ ಯೋಜನೆಯಡಿ ಕೆಳಕಂಡಂತೆ ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳು ಸೌಲಭ್ಯ ಪಡೆಯಬಹುದಾಗಿದೆ.

ಅ. ಸ್ಪರ್ಧಾತ್ಮಕ ಪರೀಕ್ಷೆಯು ಎರಡು ಹಂತಗಳಲ್ಲಿ ಅಂದರೆ ಪೂರ್ವಭಾವಿ ಪರೀಕ್ಷೆ ಮತ್ತು ಮುಖ್ಯ ಪರೀಕ್ಷೆ ಇದ್ದಲ್ಲಿ ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳು ಎರಡು ಪರೀಕ್ಷೆಗಳಿಗೂ ತರಬೇತಿ ಪಡೆಯಲು ಅರ್ಹರಿರುತ್ತಾರೆ. ಆದರೆ ಪೂರ್ವಭಾವಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದಂತಹ ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳು ಮಾತ್ರ ಮುಖ್ಯ ಪರೀಕ್ಷೆಯಲ್ಲಿ ತರಬೇತಿ ಹೊಂದಲು ಅರ್ಹರಿದ್ದು, ಸಹಾಯಧನಕ್ಕೆ ಅರ್ಹತೆ ಹೊಂದುತ್ತಾರೆ.



ಆ. ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಹಲವಾರು ಬಾರಿ ಹಾಜರಾಗಲು ಅವಕಾಶವಿದ್ದರೂ ಈ ಯೋಜನೆಯಡಿ ಅರ್ಹ ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳಿಗೆ ಒಂದು ಬಾರಿ ಮಾತ್ರ ಪೂರ್ವಭಾವಿ ಪರೀಕ್ಷೆ ಮತ್ತು ಅರ್ಹತೆಯಿದ್ದಲ್ಲಿ ಮುಖ್ಯ ಪರೀಕ್ಷೆಯ ತರಬೇತಿಗೆ ಸಹಾಯಧನ ಪಡೆಯಲು ಅವಕಾಶವಿರುತ್ತದೆ. (ಸಹಾಯಧನವನ್ನು ಒಂದು ಬಾರಿ ಪೂರ್ವಭಾವಿ ಪರೀಕ್ಷೆಗೆ ಮತ್ತು ಒಂದು ಬಾರಿ ಮುಖ್ಯ ಪರೀಕ್ಷೆಗೆ ನೀಡಲು ಅವಕಾಶವಿದೆ)

ಇ. ಒಬ್ಬ ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಯು ಗರಿಷ್ಠ ಮೂರು ವಿಧದ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಮಾತ್ರ ಸಹಾಯಧನ ಪಡೆಯಲು ಅರ್ಹರಿರುತ್ತಾರೆ.

ಈ. ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಯು ಎರಡು ಬಾರಿಗಿಂತ (ಒಂದು ಬಾರಿ ಪೂರ್ವಭಾವಿ ಪರೀಕ್ಷೆಗೆ ಮತ್ತು ಒಂದು ಬಾರಿ ಮುಖ್ಯ ಪರೀಕ್ಷೆಗೆ) ಒಂದು ವಿಧದ ಪರೀಕ್ಷೆಯಲ್ಲಿ ಒಂದಕ್ಕಿಂತ ಹೆಚ್ಚಿಗೆ ಯೋಜನೆಯಡಿ ಸಹಾಯಧನ ಪಡೆದಿಲ್ಲವೆಂಬ ಬಗ್ಗೆ ಅವನು/ಅವಳು ಪ್ರಮಾಣ ಪತ್ರವನ್ನು (Affidavit) ಸಲ್ಲಿಸಬೇಕು. ಸುಳ್ಳು ಮಾಹಿತಿ ನೀಡಿದಲ್ಲಿ ಸಂಬಂಧಪಟ್ಟ ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಯು ಸಂಪೂರ್ಣ ಶುಲ್ಕವನ್ನು ಹಿಂದಿರುಗಿಸಬೇಕಾಗಿರುತ್ತದೆ.

ಉ. ಆಯ್ಕೆಯಾದಂತಹ ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳು ಸರ್ಕಾರದಿಂದ ಗುರುತಿಸಿ ಪಟ್ಟಿ ಮಾಡಿರುವಂತಹ ಸಂಸ್ಥೆಗಳನ್ನು ತಮ್ಮ ತರಬೇತಿಗೆ ಆಯ್ಕೆ ಮಾಡಿಕೊಳ್ಳಲು ಅವಕಾಶವಿರುತ್ತದೆ.

ಊ. ಆಯ್ಕೆಯಾದಂತಹ ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳು ತರಬೇತಿಯ ಅವಧಿಯಲ್ಲಿನ ಎಲ್ಲಾ ತರಗತಿಗಳಲ್ಲೂ ಹಾಜರಿರಬೇಕು. 07 ದಿನಗಳಿಗೂ ಹೆಚ್ಚಿಗೆ ಸಮರ್ಥನೀಯ ಕಾರಣಗಳಿಲ್ಲದೇ ಗೈರು ಹಾಜರಾಗುವಂತಹ ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳಿಗೆ ಆ ಅವಧಿಗೆ ಸಹಾಯಧನದ ಸೌಲಭ್ಯವನ್ನು ಕಡಿತ ಗೊಳಿಸಲಾಗುವುದು.

ಋ. ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಯು ತರಬೇತಿ ಪಡೆಯಲು ಆಯ್ಕೆಯಾದ ಸಂಸ್ಥೆಗೆ ಸಹಾಯಧನವನ್ನು ಸಂಸ್ಥೆಯ ಬ್ಯಾಂಕ್ ಖಾತೆಗೆ ಜಮಾ ಮಾಡಲಾಗುವುದು.

ಎ. ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳು ಮಧ್ಯಂತರದಲ್ಲಿ ತರಬೇತಿಯನ್ನು ಬಿಟ್ಟು ಹೋದಲ್ಲಿ ಅಂತಹ ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳಿಂದ ತರಬೇತಿಯ ವೆಚ್ಚವನ್ನು ವಸೂಲಾತಿ ಮಾಡಲು ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು ಕ್ರಮವಹಿಸುವುದು.

ತರಬೇತಿ ನೀಡುವ ಸಂಸ್ಥೆಗಳಿಗೆ ನಿಬಂಧನೆಗಳು:

1) ನೀಡಲಾಗುವ ತರಬೇತಿಯ ಬಗ್ಗೆ ತರಬೇತಿ ನೀಡುವ ಅರ್ಹ ಸಂಸ್ಥೆಗಳೊಂದಿಗೆ ತರಬೇತಿಯ ನಿಬಂಧನೆಗಳ ಕುರಿತು ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
2) ತರಬೇತಿ ಸಂಸ್ಥೆಗಳು ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳಿಗೆ ಪರೀಕ್ಷೆಗಳನ್ನು ನಡೆಸಿ, ಪ್ರಗತಿ ವರದಿಯನ್ನು ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳಿಗೆ ಸಲ್ಲಿಸುವುದು.
3) ನಿಗದಿಗೊಳಿಸಿದ ತರಬೇತಿ ಶುಲ್ಕವನ್ನು ನಿಯೋಜಿಸಿದ ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳ ಸಂಖ್ಯೆಗೆ ಆಧರಿಸಿ ನಿರ್ದೇಶನಾಲಯದಿಂದ ಆಯಾ ಜಿಲ್ಲೆಗಳಿಗೆ ಅನುದಾನ ಬಿಡುಗಡೆ ಮಾಡಲಾಗುವುದು.
4) ಐ.ಎ.ಎಸ್. ಪೂರ್ವಭಾವಿ ಮತ್ತು ಮುಖ್ಯ ಪರೀಕ್ಷೆಗೆ 7 ರಿಂದ 9 ತಿಂಗಳ ಅವಧಿಯನ್ನು ನಿಗದಿಗೊಳಿಸಿದೆ.
5) ಕೆ..ಎ.ಎಸ್. ಪೂರ್ವಭಾವಿ ಮತ್ತು ಮುಖ್ಯ ಪರೀಕ್ಷೆಗೆ 7 ತಿಂಗಳ ಅವಧಿಯನ್ನು ನಿಗದಿಗೊಳಿಸಿದೆ.
6) ತರಬೇತಿ ಕೇಂದ್ರಗಳು ಬ್ಯಾಂಕಿಂಗ್ /ಎಲ್ಐಸಿ/ಕೆಪಿಎಸ್‌ಸಿ ನಡೆಸುವ ಇತರೆ ಪರೀಕ್ಷೆ ಹಾಗೂ ಇನ್ನಿತರ ಸ್ಪರ್ಧಾತ್ಮಕ ಪರೀಕ್ಷೆಗಳ ಹುದ್ದೆಗಳಿಗೆ ಸಂಬಂಧಿಸಿದಂತೆ ಸಮಗ್ರ ತರಬೇತಿಯನ್ನು ಮೂರು ತಿಂಗಳ ಅವಧಿಗೆ ನೀಡಬೇಕು.
7) ನೀಡಲಾಗುವ ಸಹಾಯಧನವು ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳ ತರಬೇತಿಗೆ ಸಂಬಂಧಿಸಿದಂತೆ ಸಂಸ್ಥೆಗಳಿಗೆ ಪಾವತಿಸಲಾಗುವ ವೆಚ್ಚವಾಗಿದ್ದು, ಬೇರೆ ಸ್ಥಳಗಳಲ್ಲಿ ತರಬೇತಿ ಪಡೆಯಲು ಆಯ್ಕೆಯಾಗುವ ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳು ತಾವೇ ಸ್ವತಃ ಊಟ, ವಸತಿ ಸೌಲಭ್ಯಗಳಿಗೆ ವ್ಯವಸ್ಥೆ ಮಾಡಿಕೊಳ್ಳತಕ್ಕದ್ದು.

ನಿರುದ್ಯೋಗಿ ಅಂಗವಿಕಲವಿದ್ಯಾರ್ಥಿಗಳ ಆಯ್ಕೆ ಮಾಡುವ ವಿಧಾನ:

(ಎ) ಅರ್ಹ ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲು ಸ್ಥಳೀಯ ದಿನಪತ್ರಿಕೆ/ ವೆಬ್‌ಸೈಟ್‌ಗಳಲ್ಲಿ ವ್ಯಾಪಕ ಪ್ರಚಾರಪಡಿಸುವುದು ಹಾಗೂ ಆನ್‌ಲೈನ್ ಮೂಲಕ ಸ್ವೀಕರಿಸಲಾಗುವುದು.

...3

(ಬಿ) ನಿರುದ್ಯೋಗಿ ಅಂಗವಿಕಲ ಅಭ್ಯರ್ಥಿಗಳನ್ನು ಸ್ಪರ್ಧಾತ್ಮಕ ಪರೀಕ್ಷೆಗೆ ನಿಗದಿಗೊಳಿಸಿರುವ ಪರೀಕ್ಷೆಗಳಲ್ಲಿ ಪಡೆದಿರುವ ಅಂಕಗಳನ್ನು ಆಧರಿಸಿ ಮೆರಿಟ್ ಅನುಸಾರ ಆಯ್ಕೆ ಮಾಡಲಾಗುವುದು.

(ಸಿ) ಅರ್ಹತೆ ಹೊಂದಿರುವಂತಹ ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳನ್ನು ಮೆರಿಟ್ ಅನುಸಾರ ಅವರ ಅಭಿಮತದ ಮೇಲೆ ಪಟ್ಟಿ ಮಾಡಿರುವ ಸಂಸ್ಥೆಗಳಿಗೆ ನಿಯೋಜಿಸಲಾಗುವುದು.

(ಡಿ) ಪೂರ್ವಭಾವಿ ಪರೀಕ್ಷೆಗಳಲ್ಲಿ ಆಯ್ಕೆಯಾದಂತಹ ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳಿಗೆ ಮುಖ್ಯ ಪರೀಕ್ಷೆಗೆ ತರಬೇತಿ ಪಡೆಯಲು ಅನುದಾನದ ಲಭ್ಯತೆಯ ಮೇಲ ಅವಕಾಶ ಮಾಡಿಕೊಡಲಾಗುವುದು.

## ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳ ಸಂಖ್ಯೆ:

ತರಬೇತಿಗೆ ನಿಯೋಜಿಸುವ ನಿರುದ್ಯೋಗಿ ಅಂಗವಿಕಲ ಅಭ್ಯರ್ಥಿಗಳ ಸಂಖ್ಯೆಯು ಇಲಾಖೆಯಲ್ಲಿ ಲಭ್ಯವಿರುವ ಅನುದಾನದ ಮೇಲೆ ಅವಲಂಬಿತವಾಗಿರುತ್ತದೆ.

## ತರಬೇತಿಗೆ ನಿಯೋಜಿಸುವ ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳಿಗೆ ನೀಡುವ ಸಹಾಯಧನ:

(1) ಆಯ್ಕೆಯಾದಂತಹ ಅರ್ಹ ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳ ತರಬೇತಿಗೆ ಒದಗಿಸುವ ಸಹಾಯಧನವು ವಸತಿ ಸೌಲಭ್ಯದ ವೆಚ್ಚವನ್ನೊಳಗೊಂಡಿರುತ್ತದೆ.

(2) ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳಿಗೆ ಸರ್ಕಾರದಿಂದ ಉಚಿತವಾಗಿ ವಸತಿ ನಿಲಯ ದೊರೆತಲ್ಲಿ ಈ ಸಹಾಯಧನದಲ್ಲಿ ವಸತಿ ದರವನ್ನು ಕಡಿತಗೊಳಿಸಲಾಗುವುದು.

(3) ದೆಹಲಿಯಲ್ಲಿನ ತರಬೇತಿ ಸಂಸ್ಥೆಗೆ ತರಬೇತಿಗಾಗಿ ನಿಯೋಜಿಸುವ ಪ್ರತಿ ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗೆ ಮಾಸಿಕ ರೂ.8000/- ತರಬೇತಿ ಭತ್ಯೆಯನ್ನು ಭರಿಸಲಾಗುವುದು. (ಸಹಾಯಧನ)

(4) ಹೈದರಾಬಾದ್‌ನಲ್ಲಿನ ತರಬೇತಿ ಸಂಸ್ಥೆಗೆ ತರಬೇತಿಗಾಗಿ ನಿಯೋಜಿಸುವ ಪ್ರತಿ ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗೆ ಮಾಸಿಕ ರೂ.6000/- ತರಬೇತಿ ಭತ್ಯೆಯನ್ನು ಭರಿಸಲಾಗುವುದು. (ಸಹಾಯಧನ)

(5) ಕರ್ನಾಟಕದಲ್ಲಿ ಬೆಂಗಳೂರಿನಲ್ಲಿರುವ ತರಬೇತಿ ಸಂಸ್ಥೆಗಳಿಗೆ ತರಬೇತಿಗಾಗಿ ನಿಯೋಜಿಸುವ ಹೊರ ಜಿಲ್ಲೆಗಳ ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳಿಗೆ ಮಾಸಿಕ ರೂ.4000/- ತರಬೇತಿ ಭತ್ಯೆಯನ್ನು ಭರಿಸಲಾಗುವುದು. (ಸಹಾಯಧನ)

(6) ಬೆಂಗಳೂರಿನಲ್ಲಿರುವ ತರಬೇತಿ ಸಂಸ್ಥೆಗಳಿಗೆ ತರಬೇತಿಗಾಗಿ ನಿಯೋಜಿಸುವ ಸ್ಥಳೀಯ ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳಿಗೆ ಮಾಸಿಕ ರೂ.2000/- ತರಬೇತಿ ಭತ್ಯೆಯನ್ನು ಭರಿಸಲಾಗುವುದು. (ಸಹಾಯಧನ)

## ಯೋಜನೆಯನ್ನು ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ ಆಯ್ಕೆ ಸಮಿತಿ:

| ಕ್ರ.ಸಂ. | ವಿವರ | ಪದನಾಮ |
|---|---|---|
| 1 | ಮುಖ್ಯ ಕಾರ್ಯನಿರ್ವಾಹಣಾಧಿಕಾರಿ | ಅಧ್ಯಕ್ಷರು |
| 2 | ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | ಸದಸ್ಯ ಕಾರ್ಯದರ್ಶಿ |
| 3 | ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು | ಸದಸ್ಯರು |
| 4 | ಜಿಲ್ಲಾ ಉದ್ಯೋಗ ವಿನಿಮಯ ಅಧಿಕಾರಿಗಳು | ಸದಸ್ಯರು |
| 5 | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು. | ಸದಸ್ಯರು |
| 6 | ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು | ಸದಸ್ಯರು |

## ಸಮಿತಿಯ ಕಾರ್ಯಗಳು:

1) ಸಮಿತಿಯು ಈಗಾಗಲೇ ಸರ್ಕಾರದಿಂದ (ಇತರೆ ಇಲಾಖೆಯಡಿ) ಗುರುತಿಸಲ್ಪಟ್ಟು ತರಬೇತಿ ನೀಡುತ್ತಿರುವ ಉತ್ತಮ ಸಂಸ್ಥೆಗಳನ್ನು ಪಟ್ಟಿ ಮಾಡಿ ಸದರಿ ಸಂಸ್ಥೆಗಳನ್ನು ಈ ಯೋಜನೆಯಡಿ ಸ್ಪರ್ಧಾತ್ಮಕ ಪರೀಕ್ಷೆಗಳ ತರಬೇತಿ ನೀಡಲು ಆಯ್ಕೆ ಮಾಡಿ ಸದರಿ ಸಂಸ್ಥೆಗಳು ನಿಗದಿಗೊಳಿಸಿರುವ ಶುಲ್ಕ ಇತರೆ ವಿವರದೊಂದಿಗೆ ಸರ್ಕಾರಕ್ಕೆ ಶಿಫಾರಸ್ಸಿನ ಸಹಿತ ಮಂಜೂರಾತಿಗೆ ಸಲ್ಲಿಸುವುದು.

2) ಈ ಸಮಿತಿಯು ಜಿಲ್ಲಾ ಮಟ್ಟದಲ್ಲಿ ಯೋಜನೆಯ ಅನುಷ್ಠಾನ ಹಾಗೂ ಮೇಲ್ವಿಚಾರಣೆ ಜವಾಬ್ದಾರಿಯನ್ನು ಹೊಂದಿರುತ್ತದೆ.

3) ಪರೀಕ್ಷಾ ಮಂಡಳಿಯವರು ಆಯಾ ಪರೀಕ್ಷೆಗೆ ಸಂಬಂಧಿಸಿದಂತೆ ನಿಗದಿಪಡಿಸಿದ ಪಠ್ಯಕ್ರಮದಂತೆ ತರಬೇತಿ ಸಂಸ್ಥೆಯವರು ತರಬೇತಿ ನೀಡುತ್ತಿರುವ ಬಗ್ಗೆ ಖಾತರಿ ಪಡಿಸಿಕೊಳ್ಳುವುದು.

4) ಅರ್ಜಿಗಳ ಪರಿಶೀಲನೆ ಹಾಗೂ ತರಬೇತಿಗೆ ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವ ಜವಾಬ್ದಾರಿಯನ್ನು ಈ ಸಮಿತಿ ಹೊಂದಿರುತ್ತದೆ.
5) ಈ ತರಬೇತಿ ಸಂಸ್ಥೆಗಳೊಂದಿಗೆ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು ಒಡಂಬಡಿಕೆ ಮಾಡಿಕೊಂಡು ಆಯ್ಕೆಗೊಂಡ ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳನ್ನು ನಿಯೋಜಿಸುವುದು.
6) ಯೋಜನೆಯಡಿ ಲಭ್ಯವಿರುವ ಅನುದಾನ ಹಾಗೂ ಆಯ್ಕೆಗೊಂಡ ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳ ಸಂಖ್ಯೆ ಹಾಗೂ ತರಬೇತಿ ಸಂಸ್ಥೆಗಳ ಸಂಖ್ಯೆಗಳನ್ನು ಆಧರಿಸಿ ಸಮಿತಿಯು ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳನ್ನು ತರಬೇತಿಗೆ ನಿಯೋಜಿಸುವುದು.

ಇತರೆ ಅಂಶಗಳು:

1. ಈ ಯೋಜನೆಗೆ ಪ್ರತ್ಯೇಕವಾದ ದಾಖಲಾತಿಗಳನ್ನು ನಿರ್ವಹಿಸುವುದು.
2. ತರಬೇತಿ ಸಂಸ್ಥೆಗಳು ನಿಯೋಜಿಸಲ್ಪಟ್ಟ ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳ ಸಂಪೂರ್ಣ ದಾಖಲೆ ಹಾಗೂ ಮಾಹಿತಿಗಳನ್ನು ನಿರ್ವಹಿಸಿ ತರಬೇತಿ ಅವಧಿಯಲ್ಲಿ ತಪಾಸಣೆಗೆ ಬಂದಾಗ ಅಧಿಕಾರಿಗಳಿಗೆ ತಪಾಸಣೆಗೆ ನೀಡುವುದು.
3. ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳು ವಿಕಲಚೇತನರಾಗಿರುವುದರಿಂದ ಅವರಿಗೆ ಸೂಕ್ತವಾದಂತಹ ತಡೆರಹಿತ ವಾತಾವರಣವನ್ನು ಕಲ್ಪಿಸುವುದು.
4. ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳಿಂದ ತರಬೇತಿಗೆ ಅರ್ಜಿಗಳನ್ನು ಆಹ್ವಾನಿಸಿದಾಗ ಯೋಜನೆಯ ಸಂಪೂರ್ಣ ವಿವರ ಹಾಗೂ ಇತರೆ ಅವಶ್ಯಕ ಮಾಹಿತಿಯನ್ನು ಒದಗಿಸುವುದು.
5. ಅರ್ಜಿಗಳನ್ನು ಆಹ್ವಾನಿಸಿ ಆಯ್ಕೆ ಪ್ರಕ್ರಿಯೆ ನಡೆಸುವುದು.

## ಅನುಬಂಧ – 02

## ಬೇಕಾಗುವ ಆಯವ್ಯಯದ ವಿವರ

### 540 ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳಿಗೆ ತರಬೇತಿ ನೀಡಲು ಅಂದಾಜು ಆಯವ್ಯಯದ ವಿವರ

(ರೂ.ಲಕ್ಷಗಳಲ್ಲಿ)

| ಪರೀಕ್ಷೆಯ ವಿವರ | ತರಬೇತಿ ಸ್ಥಳ | ವಿದ್ಯಾರ್ಥಿಗಳ ಸಂಖ್ಯೆ | ತರಬೇತಿ ಅವಧಿ | ನಿಗದಿಗೊಳಿಸಿದ ಮಾಸಿಕ ಭತ್ಯೆ | ಭತ್ಯೆಯ ವಿವರ | ಒಟ್ಟು ಮೊತ್ತ |
|---|---|---|---|---|---|---|
| ಐ.ಎ.ಎಸ್. ಪರೀಕ್ಷೆ (UPSC) (ಪೂರ್ವಭಾವಿ/ಮುಖ್ಯ ಪರೀಕ್ಷೆ) | ನವದೆಹಲಿ | 30 | 7–9 ತಿಂಗಳು | ರೂ.8000/– | 30x8000x9 | 21.60 |
| ಐ.ಎ.ಎಸ್. ಪರೀಕ್ಷೆ (UPSC) (ಪೂರ್ವಭಾವಿ/ಮುಖ್ಯ ಪರೀಕ್ಷೆ) | ಹೈದರಾಬಾದ್ | 30 | 7–9 ತಿಂಗಳು | ರೂ.6000/– | 30x6000x9 | 16.20 |
| ಐ.ಎ.ಎಸ್. / ಕೆ.ಎ.ಎಸ್. ಪರೀಕ್ಷೆ (ಪೂರ್ವಭಾವಿ/ಮುಖ್ಯ ಪರೀಕ್ಷೆ) | ರಾಜ್ಯದಲ್ಲಿನ ಇತರೆ ಜಿಲ್ಲೆಗಳಿಂದ ಬೆಂಗಳೂರಿಗೆ ಬರುವವರಿಗೆ | 90 | 7 ತಿಂಗಳು | ರೂ.4000/– | 90x4000x7 | 25.20 |
| ಐ.ಎ.ಎಸ್. / ಕೆ.ಎ.ಎಸ್. ಪರೀಕ್ಷೆ (ಪೂರ್ವಭಾವಿ/ಮುಖ್ಯ ಪರೀಕ್ಷೆ) | ಬೆಂಗಳೂರು (ಸ್ಥಳೀಯ) ಹಾಗೂ ಇತರೆ ಸ್ಥಳಗಳು | 90 | 7 ತಿಂಗಳು | ರೂ.2000/– | 90x2000x7 | 12.60 |
| ಬ್ಯಾಂಕ್/ಎಲ್.ಐ.ಸಿ/ಕೆ.ಪಿ.ಎಸ್.ಸಿ / ಇತರೆ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ | ರಾಜ್ಯದಲ್ಲಿನ ಇತರೆ ಜಿಲ್ಲೆಗಳಿಂದ ಬೆಂಗಳೂರಿಗೆ ಬರುವವರಿಗೆ | 150 | 3 ತಿಂಗಳು | ರೂ.4000/– | 150x4000x3 | 18.00 |
| ಬ್ಯಾಂಕ್/ಎಲ್.ಐ.ಸಿ/ಕೆ.ಪಿ.ಎಸ್.ಸಿ / ಇತರೆ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ | ಬೆಂಗಳೂರು (ಸ್ಥಳೀಯ) ಹಾಗೂ ಇತರೆ ಸ್ಥಳಗಳು | 150 | 3 ತಿಂಗಳು | ರೂ.2000/– | 150 x2000x3 | 9.00 |
| | | | | | ಒಟ್ಟು | 102.60 (100.00) |

ಒಟ್ಟು ರೂ. ತೊಂಬತ್ತೊಂಬತ್ತು ಲಕ್ಷದ ತೊಂಬತ್ತಾರು ಸಾವಿರಗಳು ಮಾತ್ರ (ರೂ.1.00 ಕೋಟಿಗೆ ಪೂರ್ಣಗೊಳಿಸಿದೆ)

ಸೂಚನೆ:- 1. ತರಬೇತಿಗಾಗಿ ತರಬೇತಿ ಸಂಸ್ಥೆಯು ನಿಗದಿಪಡಿಸಿರುವ ದರ ಅಥವ ಇಲಾಖೆಯು ನಿಗದಿಪಡಿಸಿರುವ ದರ ಯಾವುದು ಕಡಿಮೆಯೋ ಆ ದರವನ್ನು ಪರಿಗಣಿಸುವುದು.

2. ಮೇಲ್ಕಂಡ ಅಂಕಣದಲ್ಲಿ ತೋರಿಸಿರುವ ನಿರುದ್ಯೋಗಿ ಅಂಗವಿಕಲ ವಿದ್ಯಾರ್ಥಿಗಳ ಸಂಖ್ಯೆಗಳಲ್ಲಿ ವರ್ಗವಾರು ವ್ಯತ್ಯಾಸಕ್ಕೆ ಅವಕಾಶವಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ

30/12/2016
(ಜಯಲಕ್ಷ್ಮಿ)
ಸರ್ಕಾರದ ಅಧೀನ ಕಾರ್ಯದರ್ಶಿ-2
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ.

ಇವರಿಗೆ:

1. ಪ್ರಧಾನ ಮಹಾಲೇಖಪಾಲರು(ಜಿ& ಎಸ್ ಎಸ್ ಎ), ಕರ್ನಾಟಕ, ಹೊಸ ಕಟ್ಟಡ, ಆಡಿಟ್ ಭವನ", ಅಂಚೆ ಪಟ್ಟಿಗೆ ಸಂಖ್ಯೆ: 5398, ಬೆಂಗಳೂರು-560001.
2. ಪ್ರಧಾನ ಮಹಾಲೇಖಪಾಲರು(ಇ & ಆರ್ ಎಸ್ ಎ), ಕರ್ನಾಟಕ, ಹೊಸ ಕಟ್ಟಡ, ಆಡಿಟ್ ಭವನ", ಅಂಚೆ ಪಟ್ಟಿಗೆ ಸಂಖ್ಯೆ: 5398, ಬೆಂಗಳೂರು-560001.
3. ಪ್ರಧಾನ ಮಹಾಲೇಖಪಾಲರು(ಎ&ಇ), ಕರ್ನಾಟಕ, ಹೊಸ ಕಟ್ಟಡ, ಆಡಿಟ್ ಭವನ",ಅಂಚೆ ಪಟ್ಟಿಗೆ ಸಂಖ್ಯೆ: 5329, ಬೆಂಗಳೂರು-560001
4. ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ವಿ.ವಿ.ಗೋಪುರ, ಬೆಂಗಳೂರು.
5. ಆಯುಕ್ತರು, ರಾಜ್ಯ ಅಂಗವಿಕಲ ವ್ಯಕ್ತಿಗಳ ಅಧಿನಿಯಮದ ಕಛೇರಿ ಕರ್ನಾಟಕ, ನಂ.55, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯ ಕಟ್ಟಡ,ಅಭಯ ಸಂಕೀರ್ಣ,2ನೇ ಮಹಡಿ,ರಿಸಲ್ದಾರ್ ರಸ್ತೆ, ಶೇಷಾದ್ರಿ ಪುರಂ.ಬೆಂಗಳೂರು.
6. ಆಂತರಿಕ ಆರ್ಥಿಕ ಸಲಹೆಗಾರರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ವಿಕಾಸಸೌಧ, ಬೆಂಗಳೂರು.
7. ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ ವೆಚ್ಚ(10), ವಿಧಾನ ಸೌಧ, ಬೆಂಗಳೂರು
8. ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನಸೌಧ, ಬೆಂಗಳೂರು.
9. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರ ಆಪ್ತ ಸಹಾಯಕರು, ಬಹುಮಹಡಿ ಕಟ್ಟಡ, ಬೆಂಗಳೂರು.
10. ಸರ್ಕಾರದ ಉಪ ಕಾರ್ಯದರ್ಶಿಗಳು, ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರ ಆಪ್ತ ಸಹಾಯಕರು, ಬಹುಮಹಡಿ ಕಟ್ಟಡ, ಬೆಂಗಳೂರು.
11. ಶಾಖಾಧಿಕಾರಿ, ಸ್ವೀಕೃತಿ ಮತ್ತು ರವಾನೆ ಶಾಖೆ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು.
12. ಶಾಖಾ ರಕ್ಷಾ ಕಡತ/ ಒಡಿಜಿಸಿ/ ಹೆಚ್ಚುವರಿ ಪ್ರತಿಗಳು.

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಮಾನಸಿಕ ಅಸ್ವಸ್ಥರ ಪುನರ್ವಸತಿಗಾಗಿ ಮಾನಸ ಕೇಂದ್ರಗಳನ್ನು ಪ್ರಾರಂಭಿಸುವ ಹೊಸ ಯೋಜನೆಗೆ ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

ಓದಲಾಗಿದೆ: (1) ನಿರ್ದೇಶಕರು, ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆ ಇವರ ಪತ್ರ ಸಂಖ್ಯೆ: ನಿಅಕಇ:ಯೋಜನೆ:2006-07/284. ದಿನಾಂಕ: 03-02-2006, 06-04 2006 ಮತ್ತು ದಿನಾಂಕ: 31-08-2006

(2) ದಿನಾಂಕ: 17-06-2006ರಂದು ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ಅಧಿಕಾರಯುಕ್ತ ಸಮಿತಿ ಸಭೆಯ ನಡವಳಿಗಳು

ಪ್ರಸ್ತಾವನೆ: ರಾಜ್ಯದಲ್ಲಿ ಸುಮಾರು 46,146 ಜನ ಮಾನಸಿಕ ಅಸ್ವಸ್ಥರು ಇರುವುದಾಗಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯು ತಿಳಿಸುತ್ತದೆ. ಈ ಮಾನಸಿಕ ರೋಗಿಗಳಿಗೆ ಯಾವುದೇ ಕೌಟುಂಬಿಕ ಸಹಾಯವಿಲ್ಲದೇ ಇರುವುದರಿಂದ ಇವರ ಪುನರ್ವಸತಿ ಹಾಗೂ ಪುನಶ್ಚೇತನ ನೀಡಲು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ/18741/96 (GM/84) ರಲ್ಲಿ ನೀಡಿರುವ ತೀರ್ಪಿನಂತೆ ಅಂಗವಿಕಲರ ಅಧಿನಿಯಮದ ಪ್ರಕಾರ ಮಾನಸಿಕ ರೋಗಿಗಳಿಗೆ ಸಹ ಆಶ್ರಯ ಗೃಹಗಳನ್ನು (Stay Home) ಸ್ಥಾಪಿಸಲು ಸೂಚಿಸಿರುತ್ತದೆ.

ಈ ಹಿನ್ನೆಲೆಯಲ್ಲಿ ನಿರ್ದೇಶಕರು, ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆ ಇವರು ಮೇಲೆ ಓದಲಾದ ಕ್ರಮಸಂಖ್ಯೆ (1) ರ ಪತ್ರದಲ್ಲಿ ರಾಜ್ಯ ಸರ್ಕಾರವು ಮಾನಸಿಕ ಅಸ್ವಸ್ಥರಿಗೆ ಬೇಕಾಗಿರುವ ಆರೋಗ್ಯ ಪೋಷಣೆ ಮತ್ತು ಆಶ್ರಯವನ್ನು ನೀಡುವ ಉದ್ದೇಶದಿಂದ ಮಾನಸ ಕೇಂದ್ರಗಳನ್ನು 4 ವಿಭಾಗ ಮಟ್ಟದಲ್ಲಿ ತೆರೆಯಲು ಉದ್ದೇಶಿಸಿ, ಈ ಬಗ್ಗೆ ಕರ್ನಾಟಕ ರಾಜ್ಯ ಮೆಂಟಲ್ ಹೆಲ್ತ್ ಅಥಾರಿಟಿಯೊಂದಿಗೆ ಸಮಾಲೋಚಿಸಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲನೆ ಮಾಡಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ನಿರ್ದೇಶನಗಳಂತೆ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ: 145: ಪಿಹೆಚ್‌ಪಿ: 2006 (3) ಬೆಂಗಳೂರು.**

**ದಿನಾಂಕ: 17-08-2007.**

ಮಾನಸಿಕ ಅಸ್ವಸ್ಥರ ಪುನರ್ವಸತಿಗಾಗಿ ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆ ವತಿಯಿಂದ ಈ ಕೆಳಕಂಡ ಜಿಲ್ಲೆಗಳಲ್ಲಿನ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಟಿ.ಬಿ. ಸ್ಯಾನಿಟೋರಿಯಂಗಳಲ್ಲಿ 'ಮಾನಸ ಕೇಂದ್ರ' ಗಳನ್ನು 2007-08 ನೇ ಸಾಲಿನಿಂದ ಪ್ರಾರಂಭಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

1. ಬೆಂಗಳೂರು 2. ಬೆಳಗಾಂ 3. ಬಳ್ಳಾರಿ 4. ರಾಯಚೂರು 5. ಶಿವಮೊಗ್ಗ

ಫಲಾನುಭವಿಗಳ ಆಯ್ಕೆ:

1. ಮಾನಸಿಕ ಅಸ್ವಸ್ಥರು ಎಂದರೆ ಅಂಗವಿಕಲರ ಅಧಿನಿಯಮ 1995ರಲ್ಲಿ ತಿಳಿಸಿರುವ ವ್ಯಾಖ್ಯಾನಕ್ಕೆ ಒಳಪಟ್ಟಿರುತ್ತದೆ.
2. ಫಲಾನುಭವಿಯು ಮಾನಸಿಕ ಅಸ್ವಸ್ಥರಾಗಿದ್ದು ಅವರ ಅಂಗವಿಕಲತೆಯು ಕನಿಷ್ಠ ಶೇಕಡ 40ರಷ್ಟು ಇರತಕ್ಕದ್ದು.
3. ಫಲಾನುಭವಿಯ ಕೌಟುಂಬಿಕ ವಾರ್ಷಿಕ ಆದಾಯ ನಗರ ಪ್ರದೇಶಗಳಲ್ಲಿ 24,000 ಮತ್ತು ಗ್ರಾಮೀಣ ಪ್ರದೇಶದಲ್ಲಿ 11, 500 ರೂಗಳಿಗಿಂತ ಕಡಿಮೆ ಇರತಕ್ಕದ್ದು.

4. ನಿರ್ಗತಿಕ, ರಸ್ತೆಗಳಲ್ಲಿ ಓಡಾಡುವ (Wandering) ಮಾನಸಿಕ ಅಸ್ವಸ್ಥರನ್ನು ಈ ಕೇಂದ್ರಗಳಿಗೆ ಸೇರಿಸಿಕೊಳ್ಳುವುದು.

5. ರಾಜ್ಯ ಉಚ್ಚನ್ಯಾಯಾಲಯವು ಮತ್ತು ಇತರೆ ನ್ಯಾಯಾಲಯಗಳು ಆದೇಶಿಸುವ ಫಲಾನುಭವಿಗಳನ್ನು ಸಹ ಈ ಕೇಂದ್ರಗಳಿಗೆ ಸೇರಿಸತಕ್ಕದ್ದು.

ಮಾರ್ಗಸೂಚಿಗಳು:

1. ಮಾನಸ ಕೇಂದ್ರದಲ್ಲಿ ಮಾನಸಿಕ ಅಸ್ವಸ್ಥರಿಗೆ ಅವಶ್ಯಕವಾಗಿ ಬೇಕಾಗಿರುವ ಆರೋಗ್ಯ ಪೋಷಣೆ ಮತ್ತು ಆಶ್ರಯವನ್ನು ನೀಡಬೇಕು.

2. ಈ ಮಾನಸ ಕೇಂದ್ರಗಳಲ್ಲಿ ಮಹಿಳೆಯರಿಗೆ ಆದ್ಯತೆಯನ್ನು ನೀಡತಕ್ಕದ್ದು.

3. ಈ ಮಾನಸ ಕೇಂದ್ರಗಳು ಮಾನಸಿಕ ಅಸ್ವಸ್ಥರಿಗೆ ಖಾಯಂ ನೆಲೆಸುವ ಕೇಂದ್ರಗಳಾಗಿರಬಾರದು ಪೋಷಕರ ವಿಳಾಸ ತಿಳಿಯದ ಮಾನಸಿಕ ಅಸ್ವಸ್ಥರನ್ನು ಕೇಂದ್ರಕ್ಕೆ ಸೇರಿಸಿಕೊಂಡು ಪೋಷಕರನ್ನು ಗುರುತಿಸಲು ಕ್ರಮಕೈಗೊಂಡು ಫಲಾನುಭವಿಗಳನ್ನು ಪೋಷಕರಿಗೆ ಒಪ್ಪಿಸುವ ಕ್ರಮವನ್ನು ತೆಗೆದುಕೊಳ್ಳತಕ್ಕದ್ದು.

4. ಈ ಮಾನಸಿಕ ಕೇಂದ್ರದಲ್ಲಿರುವ ಮಾನಸಿಕ ಅಸ್ವಸ್ಥರಿಗೆ ಬೇಕಾಗುವ ಔಷಧಗಳನ್ನು ಜಿಲ್ಲಾ/ತಾಲ್ಲೂಕು ಆಸ್ಪತ್ರೆಗಳು ಉಚಿತವಾಗಿ ಸರಬರಾಜು ಮಾಡಲು ಮತ್ತು ಇಂಡೆಂಟ್ ಮಾಡುವಾಗ ಈ ಕೇಂದ್ರಗಳನ್ನು ಸಹ ದೃಷ್ಟಿಯಲ್ಲಿ ಇಟ್ಟುಕೊಂಡು ಇಂಡೆಂಟ್ ಮಾಡಲು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯು ಕ್ರಮಕೈಗೊಳ್ಳತಕ್ಕದ್ದು.

5. ಪ್ರತಿ ಮಾನಸ ಕೇಂದ್ರದಲ್ಲಿ ತುರ್ತು ಚಿಕಿತ್ಸೆಗಾಗಿ ಒಂದು ವಾಹನವು ಅತ್ಯಗತ್ಯವಾಗಿದ್ದು, ಈ ವಾಹನವನ್ನು ದಾನಿಗಳಿಂದ ಪಡೆಯಬಹುದಾಗಿದೆ.

ಪ್ರತಿ ಮಾನಸ ಕೇಂದ್ರಕ್ಕೆ ತಗಲುವ ವೆಚ್ಚದ/ಆಯವ್ಯಯ ವಿವರಗಳನ್ನು ಈ ಆದೇಶದ ಅನುಬಂಧದಲ್ಲಿ ನೀಡಲಾಗಿದೆ. ಇದಕ್ಕೆ ಸಂಬಂಧಿಸಿದ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2235-01-101-0-49 ಯೋಜನೇತರದಿಂದ ಭರಿಸತಕ್ಕದ್ದು.

ಈ ಆದೇಶವನ್ನು ದಿನಾಂಕ: 17-06-2006ರಂದು ನಡೆದ ಅಧಿಕಾರಯುಕ್ತ ಸಮಿತಿ ಸಭೆಯ ಅನುಮೋದನೆಯಂತೆ ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD:488:EXP-3:2006, ದಿನಾಂಕ:18-12-2006ರಲ್ಲಿ ನೀಡಿರುವ ಸಹಮತಿ ಪ್ರಕಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

(ವಿ. ಶಿವಕುಮಾರ)
ಸರ್ಕಾರ ಅಧೀನ ಕಾರ್ಯದರ್ಶಿ,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

ಇವರಿಗೆ,

ಸಂಕಲನಕಾರರು, ಕರ್ನಾಟಕ ರಾಜ್ಯಪತ್ರ, ಇವರಿಗೆ ಮುಂದಿನ ಸಂಚಿಕೆಯಲ್ಲಿ ಪ್ರಕಟಣೆ ಮಾಡಿ ಆದೇಶದ 500 ಪ್ರತಿಗಳನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗೆ ಒದಗಿಸಲು ಕೋರಲಾಗಿದೆ.

ಸರ್ಕಾರದ ಆದೇಶ ಸಂಖ್ಯೆ:ಮಮಇ:145:ಪಿಹೆಚ್‌ಪಿ:2006(3) ದಿನಾಂಕ:17-08-2008ಕ್ಕೆ

ಅನುಬಂಧ

| ಕ್ರ. ಸಂ. | ವಿಷಯ | ಹುದ್ದೆಗಳ ಸಂಖ್ಯೆ | ತಿಂಗಳಿಗೆ ತಗಲುವ ವೆಚ್ಚ (ರೂಗಳಲ್ಲಿ) | ವರ್ಷಕ್ಕೆ ತಗಲುವ ವೆಚ್ಚ (ರೂಗಳಲ್ಲಿ) | ಯಾವ ಇಲಾಖೆ / ಸಂಸ್ಥೆಯಿಂದ ಸೇವೆ ಪಡೆಯಲಾಗುವುದು |
|---|---|---|---|---|---|
| 1. | ಅಧೀಕ್ಷಕರು ವೇತನ ಶ್ರೇಣಿ 6000-11200 ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಅಥವಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಿಂದ ನಿಯೋಜನೆ ಮೇರೆಗೆ | 1 | 12020 | 1,44,240 | ಸ್ಥಾಪನೆಯಾಗುವ ತನಕ ಬಾಹ್ಯ ಮೂಲದ ಮುಖಾಂತರ ಸೇವೆಯನ್ನು ಪಡೆಯಲಾಗುವುದು |
| 2. | ಸಮಾಜ ವಿಷಯ ಪರಿಶೀಲಕರು (ವಿದ್ಯಾರ್ಹತೆ MSW, MSW In Medical Phychriatist ಓದಿದವರಿಗೆ ಆದ್ಯತೆ) | 1 | 8,400 | 1,00,800 | ಬಾಹ್ಯಮೂಲದ ಮುಖಾಂತರ |
| 3. | ನರ್ಸ್ (4ನರ್ಸ್ ಸಿಬ್ಬಂದಿಯನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಿಂದ ನಿಯೋಜನೆ ಮೇರೆಗೆ) ವೇತನ ಶ್ರೇಣಿ ರೂ. 4575-8400 | 4 | 9187X4= 36,478 | 4,40,976 | ಸೃಜನೆ ನಂತರ ಆರೋಗ್ಯ ಇಲಾಖೆಯಿಂದ ನಿಯೋಜನೆ ಮೇರೆಗೆ ಅಲ್ಲಿಯವರೆಗೆ ಬಾಹ್ಯ ಮೂಲದ ಮುಖಾಂತರ ಸೇವೆ ಪಡೆಯಲಾಗುವುದು. |
| 4. | ಲೆಕ್ಕಿಗರು (B.com) | 1 | 3,000 | 36,000 | ಬಾಹ್ಯಮೂಲದ ಮುಖಾಂತರ |
| 5. | ಮನೋತಜ್ಞರು (psychiatrist) ಪ್ರತಿ ಸಂದರ್ಶನಕ್ಕೆ ರೂ.250/- ವಾರಕ್ಕೆ ಒಂದು ಸಂದರ್ಶನ (ಸರ್ಕಾರಿ ಆಸ್ಪತ್ರೆಗಳಿಂದ) | 1 | 1,000 | 12,000 | ಬಾಹ್ಯಮೂಲದ ಮುಖಾಂತರ |
| 6. | ವಾಹನ ಚಾಲಕರು 3000-5450 | 1 | 3,000 | 36,000 | ಬಾಡಿಗೆ / ವಾಹನಗಳಿಂದ |
| 7. | ವಾಹನ ನಿರ್ವಹಣೆಗೆ/ಬಾಡಿಗೆಗೆ (ವಾಹನ, ಇಂಧನ ಹಾಗೂ ನಿರ್ವಹಣೆಗಾಗಿ) | | 5,000 | 60,000 | ಬಾಹ್ಯಮೂಲದ ಮುಖಾಂತರ ಪಡೆದ ವಾಹನದ ನಿರ್ವಹಣೆಗೆ |

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ : ಅಂಗವಿಕಲ ಮಹಿಳೆಯರ ಮತ್ತು ವಿದ್ಯಾರ್ಥಿನಿಯರ ವಸತಿ ನಿಲಯಗಳನ್ನು ಪ್ರಾರಂಭಿಸಲು ಆಡಳಿತಾತ್ಮಕ ಮಂಜೂರಾತಿಯನ್ನು ನೀಡುವ ಬಗ್ಗೆ.

ಓದಲಾಗಿದೆ: 1. ನಿರ್ದೇಶಕರು, ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯ ಪತ್ರ ಸಂ: ನಿಅಕಇ:ಯೋ:11:2006-07:ದಿ: 18-4-2006

2. 17-6-2006 ರಂದು ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು

### ಪ್ರಸ್ತಾವನೆ

ನಿರ್ದೇಶಕರು, ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯವರು ಮೇಲೆ ಕ್ರಮಾಂಕ 1 ರಲ್ಲಿ ಓದಲಾದ ದಿನಾಂಕ: 18-4-2006 ಪತ್ರದೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ ಅಂಗವಿಕಲ ಮಹಿಳೆಯರ ಮತ್ತು ವಿದ್ಯಾರ್ಥಿನಿಯರ ವಸತಿ ನಿಲಯಗಳನ್ನು ಪ್ರಾರಂಭಿಸುವ ಯೋಜನೆಯ ಅನುಷ್ಠಾನಕ್ಕೆ ಸರ್ಕಾರದ ಆಡಳಿತಾತ್ಮಕ ಮಂಜೂರಾತಿ ನೀಡಬೇಕೆಂದು ಕೋರಿರುತ್ತಾರೆ.

ರಾಜ್ಯದಲ್ಲಿ 940643 ಅಂಗವಿಕಲರು ಇರುವರೆಂದು 2001ನೆಯ ಜನಗಣತಿಯ ಪ್ರಕಾರ ತಿಳಿದು ಬಂದಿರುತ್ತದೆ. ಅಂಗವಿಕಲರಿಗೆ ಇಲಾಖೆಯು ಶಿಕ್ಷಣ ಕ್ಷೇತ್ರದಲ್ಲಿ ಹೆಚ್ಚು ಒತ್ತು ನೀಡುವುದು ಅವಶ್ಯಕತೆ ಇರುತ್ತದೆ. ಅಂಗವಿಕಲರಿಗೆ ಇಲಾಖೆಯು ಶಿಕ್ಷಣ ಕ್ಷೇತ್ರದಲ್ಲಿ ಹೆಚ್ಚು ಒತ್ತು ನೀಡುವುದು ಅವಶ್ಯಕತೆ ಇರುತ್ತದೆ. ಅಂಗವಿಕಲರು ವಿದ್ಯಾವಂತರಾದಲ್ಲಿ ಉದ್ಯೋಗಾವಕಾಶಗಳು ಹೇರಳವಾಗಿ ದೊರೆಯುತ್ತದೆ. ಅಂಗವಿಕಲರು ವಿದ್ಯಾಭ್ಯಾಸವನ್ನು ಮುಂದುವರೆಸಲು ವಸತಿ ನಿಲಯಗಳ ಕೊರತೆಯಿರುವುದರಿಂದ ಸಾಧ್ಯವಾಗಿರುವುದಿಲ್ಲ. ಆದ್ದರಿಂದ ಮಹಿಳಾ ಅಂಗವಿಕಲರಿಗೆ ಶಿಕ್ಷಣವನ್ನು ಮುಂದುವರೆಯಲು ಅನುಕೂಲವಾಗುವ ರೀತಿಯಲ್ಲಿ ವಸತಿ ನಿಲಯಗಳನ್ನು ಪ್ರಾರಂಭಿಸಲು ಉದ್ದೇಶಿಸಲಾಗಿದೆ. ಜಿಲ್ಲೆಗಳಲ್ಲಿ ಅಂಗವಿಕಲ ಉದ್ಯೋಗಸ್ಥ ಮತ್ತು ತರಬೇತುದಾರರಿಗೆ ವಸತಿ ನಿಲಯಗಳು ಇರುವುದಿಲ್ಲ. ವಸತಿ ನಿಲಯಗಳನ್ನು ಪ್ರಾರಂಭಿಸುವುದರಿಂದ ಉದ್ಯೋಗಗಳನ್ನು ಅರಸಿ ಜಿಲ್ಲೆಗಳಿಗೆ ಬರುವ ಮಹಿಳಾ ಅಂಗವಿಕಲರಿಗೆ ಈ ವಸತಿ ನಿಲಯಗಳಲ್ಲಿ ವಿದ್ಯಾರ್ಥಿನಿಯರ ಜೊತೆ ಇರಲು ಅವಕಾಶ ಕಲ್ಪಿಸಬಹುದಾಗಿರುತ್ತದೆ. ಇದರಿಂದ ಉದ್ಯೋಗಸ್ಥ ಮಹಿಳೆಯರಿಗೆ, ಅಂಗವಿಕಲ ಮಹಿಳಾ ತರಬೇತುದಾರರಿಗೆ ಹಾಗೂ ವಿದ್ಯಾರ್ಥಿನಿಯರಿಗೆ ಜಿಲ್ಲೆಗಳಲ್ಲಿ ವಸತಿ ನಿಲಯಗಳ ಸೌಲಭ್ಯದ ಸಮಸ್ಯೆಯು ಬಗೆಹರಿಯುವುದೆಂದು ತಮ್ಮ ಪ್ರಸ್ತಾವನೆಯಲ್ಲಿ ನಿರ್ದೇಶಕರು ತಿಳಿಸಿರುತ್ತಾರೆ.

ನಿರ್ದೇಶಕರು, ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆ ಇವರು ಉದ್ಯೋಗಸ್ಥ ಅಂಗವಿಕಲ ಮಹಿಳೆಯರಿಗೆ, ಅಂಗವಿಕಲ ವಿದ್ಯಾರ್ಥಿಗಳಿಗೆ ಮತ್ತು ತರಬೇತಿ ಪಡೆಯುತ್ತಿರುವ ಅಂಗವಿಕಲ ಮಹಿಳೆಯರಿಗೆ ವಸತಿ ನಿಲಯಗಳನ್ನು ಪ್ರಾರಂಭಿಸಲು ಉದ್ದೇಶಿಸಿ ಸಲ್ಲಿಸಿರುವ ಪ್ರಸ್ತಾವನೆಯನ್ನು ದಿನಾಂಕ: 17-6-2006 ರಂದು ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ಅಧಿಕಾರಯುಕ್ತ ಸಮಿತಿ ಸಭೆಯಲ್ಲಿ ಪರಿಶೀಲಿಸಿ ಸಮಿತಿಯು ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಆರ್ಥಿಕ ಇಲಾಖೆಯ ಸಹಮತಿ ಪಡೆಯಬೇಕೆಂಬ ಷರತ್ತಿನೊಂದಿಗೆ ಅನುಮೋದನೆಯನ್ನು ನೀಡಿರುತ್ತದೆ ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ:145:ಪಿಹೆಚ್‌ಪಿ:2006(2):ಬೆಂಗಳೂರು ದಿ: 29-7-2006**

ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯಿಂದ ಅಂಗವಿಕಲರ ಮಹಿಳಾ ವಸತಿ ನಿಲಯಗಳನ್ನು ಈ ಕೆಳಕಂಡ 20 ಜಿಲ್ಲೆಗಳಲ್ಲಿ ಪ್ರಾರಂಭಿಸಲು ಸರ್ಕಾರದ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಿದೆ.

1. ಬೆಳಗಾಂ, 2. ಧಾರವಾಡ, 3. ದಾವಣಗೆರೆ, 4. ಚಿತ್ರದುರ್ಗ, 5. ಗುಲ್ಬರ್ಗಾ, 6. ರಾಯಚೂರು, 7. ಬಾಗಲಕೋಟೆ, 8. ಬಿಜಾಪುರ, 9. ಉತ್ತರ ಕನ್ನಡ, 10. ಕೋಲಾರ, 11. ಹಾಸನ, 12. ತುಮಕೂರು, 13. ಮೈಸೂರು, 14. ಶಿವಮೊಗ್ಗ, 15. ಹಾವೇರಿ, 16. ಗದಗ್, 17. ಬಳ್ಳಾರಿ, 18. ಬೆಂಗಳೂರು (ನ), 19. ಬೆಂಗಳೂರು (ಗ್ರಾ), 20. ಬೀದರ್

ಉದ್ಯೋಗಸ್ಥ ಅಂಗವಿಕಲ ಮಹಿಳೆಯರಿಗೆ ಅಂಗವಿಕಲ ವಿದ್ಯಾರ್ಥಿನಿಯರಿಗೆ ಮತ್ತು ತರಬೇತಿ ಪಡೆಯುತ್ತಿರುವ ಅಂಗವಿಕಲ ಮಹಿಳೆಯರಿಗೆ ವಸತಿ ನಿಲಯವನ್ನು ಸ್ವಯಂ ಸೇವಾ ಸಂಸ್ಥೆಗಳ ಮುಖಾಂತರ ನಡೆಸಬೇಕಾಗಿದ್ದು ಸದರಿ ಸ್ವಯಂ ಸೇವಾ ಸಂಸ್ಥೆಗಳನ್ನು ಆಯ್ಕೆ ಮಾಡಲು ರಚಿಸಿರುವ ಸಮಿತಿ ಮತ್ತು ಮಾನದಂಡಗಳು ಹಾಗೂ ಸ್ವಯಂ ಸೇವಾ ಸಂಸ್ಥೆಗಳು ಪೂರೈಸಬೇಕಾದ ಷರತ್ತುಗಳನ್ನು ಅನುಬಂಧ-1 ರಲ್ಲಿ ನೀಡಲಾಗಿದೆ. ಯೋಜನೆಯ ಅನುಷ್ಠಾನಕ್ಕೆ ಆಯ್ಕೆ ಮಾಡುವ ಸ್ವಯಂ ಸೇವಾ ಸಂಸ್ಥೆಗಳಿಗೆ ವಸತಿ ನಿಲಯ ನಿರ್ವಹಣೆಗೆ ಒಂದು ವರ್ಷಕ್ಕೆ ನೀಡಬಹುದಾದ ವಾರ್ಷಿಕ ಅಂದಾಜು ವೆಚ್ಚದ ವಿವರವನ್ನು ಅನುಬಂಧ 2 ರಲ್ಲಿ ನೀಡಲಾಗಿದೆ.

ಸದರಿ ಯೋಜನೆಗೆ ಸಂಬಂಧಿಸಿದ ವೆಚ್ಚವನ್ನು ಲೆಕ್ಕಶೀರ್ಷಿಕೆ 2235-02-101-0-50 ಯೋಜನೇತರ ಅಡಿ ಲಭ್ಯವಿರುವ ಆಯವ್ಯಯದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ದಿನಾಂಕ: 17-6-2006 ರಂದು ನಡೆದ ಅಧಿಕಾರಯುಕ್ತ ಸಮಿತಿಯ ಸಭೆಯ ಅನುಮೋದನೆ ಮೇರೆಗೆ ಮತ್ತು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಎಫ್‌ಡಿ:286:EXP.3/2006 ದಿನಾಂಕ: 22-7-2006 ರಲ್ಲಿ ನೀಡಿರುವ ಸಹಮತಿ ಪ್ರಕಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
(ಪಾರ್ವತಿ ಕೇಶವಾಚಾರ್)
ಸರ್ಕಾರ ಉಪ ಕಾರ್ಯದರ್ಶಿ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

ಪ್ರತಿ ಮಾಹಿತಿಗಾಗಿ

1. ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಗಳು.
2. ಮಾನ್ಯ ಉಪ ಮುಖ್ಯಮಂತ್ರಿಗಳ ಆಪ್ತ ಕಾರ್ಯದರ್ಶಿಗಳು
3. ಮಾನ್ಯ ಇಲಾಖಾ ಸಚಿವರ ಆಪ್ತ ಕಾರ್ಯದರ್ಶಿಗಳು
4. ಪ್ರಧಾನ ಕಾರ್ಯದರ್ಶಿಗಳು / ಉಪ ಕಾರ್ಯದರ್ಶಿಗಳು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಅವರ ಆಪ್ತ ಸಹಾಯಕರಿಗೆ.

ಸರ್ಕಾರಿ ಆದೇಶ ಸಂಖ್ಯೆ: ಮಮಇ:145:ಪಿಹೆಚ್‌ಪಿ:2006(2): ಬೆಂಗಳೂರು ದಿ: 29-7-2006

ಅನುಬಂಧ - 1

ಉದ್ಯೋಗಸ್ಥ ಅಂಗವಿಕಲ ಮಹಿಳೆಯರಿಗೆ ಮತ್ತು ಮಹಿಳಾ ವಿದ್ಯಾರ್ಥಿಗಳಿಗೆ ಪ್ರಾರಂಭಿಸುವ ವಸತಿ ನಿಲಯದ ಯೋಜನೆಯ ವಿವರ ಮತ್ತು ಷರತ್ತುಗಳು.

ಅಂಗವಿಕಲ ಉದ್ಯೋಗಸ್ಥ ಮತ್ತು ತರಬೇತುದಾರರಿಗೆ ವಸತಿ ನಿಲಯವನ್ನು ಒದಗಿಸುವುದು ಅತ್ಯವಶ್ಯಕತೆ ಇರುತ್ತದೆ. ಅದೇ ರೀತಿ ಅಂಗವಿಕಲರು ವಿದ್ಯಾಭ್ಯಾಸವನ್ನು ಮುಂದುವರೆಸಲು ಅನುಕೂಲವಾಗುವಂತೆ ಜಿಲ್ಲೆಗಳಲ್ಲಿ ವಸತಿ ನಿಲಯವನ್ನು ಸ್ವಯಂ ಸೇವಾ ಸಂಸ್ಥೆಗಳ ಮುಖಾಂತರ ಪ್ರಾರಂಭಿಸಲಾಗುವುದು.

1. ಈ ವಸತಿ ನಿಲಯದಲ್ಲಿ ಆರ್ಥಿಕವಾಗಿ ಹಿಂದುಳಿದ ಮತ್ತು ಓದುತ್ತಿರುವ ಅಂಗವಿಕಲ ವಿದ್ಯಾರ್ಥಿನಿಯರಿಗೆ ಮಾತ್ರ ಉಚಿತ ಊಟ ಮತ್ತು ವಸತಿಯನ್ನು ಕಲ್ಪಿಸಲಾಗಿರುತ್ತದೆ. ತರಬೇತಿಯನ್ನು ಪಡೆಯುತ್ತಿರುವ ಆರ್ಥಿಕವಾಗಿ ಹಿಂದುಳಿದ ವಿದ್ಯಾರ್ಥಿನಿಯರಿಗೆ ಈ ವಸತಿ ನಿಲಯದಲ್ಲಿ ಉಚಿತ ಊಟ ಮತ್ತು ವಸತಿ ಸೌಕರ್ಯವನ್ನು ಕಲ್ಪಿಸಲಾಗುತ್ತದೆ.
2. ಉದ್ಯೋಗಸ್ಥ ಮಹಿಳೆಯರು ಈ ವಸತಿ ನಿಲಯದಲ್ಲಿ ಪ್ರವೇಶ ಪಡೆದಲ್ಲಿ ಊಟದ ವೆಚ್ಚವಾಗಿ ತಿಂಗಳಿಗೆ ರೂ. 600-00 ಗಳನ್ನು ಮಾತ್ರ ಪಾವತಿಸಬೇಕಾಗಿರುತ್ತದೆ.
3. ಈ ವಸತಿ ನಿಲಯದಲ್ಲಿ ಪ್ರವೇಶ ಪಡೆದಿರುವ ವಿದ್ಯಾರ್ಥಿನಿಯರು ಇತರೆ ಯಾವುದೇ ತರಹದ ಶಿಷ್ಯ ವೇತನವನ್ನು ಪಡೆಯಲು ಅರ್ಹರಿರುವುದಿಲ್ಲ. (ಪ್ರತಿಭಾನ್ವಿತವಾಗಿ ಪಡೆಯುವ ಶಿಷ್ಯ ವೇತನ ಹೊರತುಪಡಿಸಿ)
4. ಈ ವಸತಿ ನಿಲಯದಲ್ಲಿ ವಸತಿ ಸೌಕರ್ಯ ಪಡೆಯಲಿಚ್ಛಿಸುವ ಶಾಲಾ / ಕಾಲೇಜು ವಿದ್ಯಾರ್ಥಿನಿಯರು ಮತ್ತು ವೃತ್ತಿ ತರಬೇತಿ ಪಡೆಯುತ್ತಿರುವ ವಿದ್ಯಾರ್ಥಿನಿಯರ ಕುಟುಂಬವು ಬಡತನ ರೇಖೆಗಿಂತ ಕೆಳಮಟ್ಟದಲ್ಲಿರಬೇಕು.

**ಸ್ವಯಂ ಸೇವಾ ಸಂಸ್ಥೆಗಳನ್ನು ಆಯ್ಕೆ ಮಾಡಲು ಅನುಸರಿಸಬೇಕಾದ ಮಾನದಂಡಗಳು**

- ಸಂಸ್ಥೆಯು ಕರ್ನಾಟಕ ಸಂಘ ಸಂಸ್ಥೆಗಳ ನೊಂದಣಿ ಕಾಯ್ದೆ 1960 ರಡಿ ಅಥವಾ ಸಾರ್ವಜನಿಕ ಟ್ರಸ್ಟ್ ಡೀಡ್ ಅಡಿ ನೊಂದಾಯಿಸಿ ಕನಿಷ್ಟ 3 ವರ್ಷಗಳಾಗಿದ್ದು ಸಾಮಾಜಕವಾಗಿ ಉತ್ತಮ ಹೆಸರು ಗಳಿಸಿರಬೇಕು.
- ಸಂಸ್ಥೆಯು ಸರಿಯಾಗಿ ರಚಿತಗೊಂಡಿರುವ ಕಾರ್ಯಕಾರಿ ಸಮಿತಿಯನ್ನು ಹೊಂದಿದ್ದು ಅದರ ಅಧಿಕಾರಿ ಜವಾಬ್ದಾರಿ ಮತ್ತು ಕರ್ತವ್ಯವನ್ನು ಸ್ಪಷ್ಟವಾಗಿ ಲಿಖಿತ ರೂಪದಲ್ಲಿ ಸಂವಿಧಾನ ಬದ್ಧವಾಗಿ ವ್ಯಾಖ್ಯಾನಿಸಿರಬೇಕು.
- ಸುಭದ್ರವಾಗಿ ಆರ್ಥಿಕವಾಗಿ ಸಬಲವಾಗಿರುವ ಮಹಿಳೆಯರ ಸ್ವಯಂ ಸೇವಾ ಸಂಸ್ಥೆಗಳಿಗೆ ನೀಡಬಹುದಾಗಿರುತ್ತದೆ.
- ವಸತಿ ನಿಲಯ ನಡೆಸಲು ಆಯ್ಕೆ ಮಾಡಿರುವ ಸ್ಥಳ ಹಾಗೂ ಕಟ್ಟಡ ಮೂಲಭೂತ ಸೌಕರ್ಯ ಹೊಂದಿದ್ದು ವಸತಿ ನಿಲಯ ನಡೆಸಲು ಯೋಗ್ಯವಾಗಿರಬೇಕು. ಹಾಗೂ ವಸತಿ ನಿಲಯವು ಸುರಕ್ಷಿತ ಸ್ಥಳದಲ್ಲಿರಬೇಕು.
- ಸಂಸ್ಥೆಯು ಕಾರ್ಯಚಟುವಟಿಕೆಗಳಲ್ಲಿ ವಸತಿ ನಿಲಯವನ್ನು ನಡೆಸುತ್ತಿರುವ ಅನುಭವ ಹೊಂದಿದ್ದಲ್ಲಿ ಆದ್ಯತೆ ನೀಡಲಾಗುವುದು ಸಂಘ ಸಂಸ್ಥೆಗಳು ಆರ್ಥಿಕವಾಗಿ ಸದೃಢವಾಗಿರಬೇಕು.

ಒಂದು ವಿದ್ಯಾರ್ಥಿ ನಿಲಯದಲ್ಲಿ ಗರಿಷ್ಟ 50 ಫಲಾನುಭವಿಗಳಿಗೆ ಅವಕಾಶ ಕಲ್ಪಿಸಬಹುದಾಗಿರುತ್ತದೆ.

ಸ್ವಯಂ ಸೇವಾ ಸಂಸ್ಥೆಗಳು ಪಾಲಿಸಬೇಕಾದ ಷರತ್ತುಗಳು ಈ ಕೆಳಕಂಡಂತಿದೆ.

1. ವಸತಿ ನಿಲಯ ನಡೆಸುವ ಸ್ವಯಂ ಸೇವಾ ಸಂಸ್ಥೆಗಳು ಯೋಜನೆ ಅನುಷ್ಠಾನದ ಪ್ರಮುಖ ಹೊಣೆಗಾರಿಕೆಯನ್ನು ಹೊರಬೇಕು.
2. ವಿದ್ಯಾರ್ಥಿನಿಯರ ಶೈಕ್ಷಣಿಕ ಸಾಧನೆಯನ್ನು ಪರಿಣಾಮಕಾರಿಯಾಗಿ ನಿರ್ವಹಿಸಬೇಕು.

3. ಅನುದಾನ ಬಿಡುಗಡೆ ಮೊದಲು ಸ್ವಯಂ ಸೇವಾ ಸಂಸ್ಥೆಯು ರೂ. 50 ಗಳ ಮೌಲ್ಯದ ಛಾಪಾ ಕಾಗದದಲ್ಲಿ ಸರ್ಕಾರ / ಇಲಾಖೆಯಿಂದ ಪಡೆಯುವ ಅನುದಾನವನ್ನು ನಿಗದಿತ ಉದ್ದೇಶಕ್ಕೆ ಬಳಸಲಾಗುತ್ತದೆಂದು ತಪ್ಪಿದಲ್ಲಿ ಶೇ. 15 ರಷ್ಟು ಸರಳ ಬಡ್ಡಿಯೊಂದಿಗೆ ಸರ್ಕಾರಕ್ಕೆ/ಇಲಾಖೆಗೆ ಹಿಂತಿರುಗಿಸುವುದಲ್ಲದೆ, ಸರ್ಕಾರದ ಹಣದ ದುರುಪಯೋಗದ ಆಧಾರದ ಮೇಲೆ ಕ್ರಿಮಿನಲ್ ಶಿಕ್ಷೆಗೆ ಸಿದ್ಧರಿರುವುದಾಗಿ ಮುಚ್ಚಳಿಕೆ ನೀಡತಕ್ಕದ್ದು.

4. ವಸತಿ ನಿಲಯದ ಫಲಾನುಭವಿಗಳಿಂದ ಯಾವುದೇ ರೀತಿಯ ಶುಲ್ಕ ದೇಣಿಗೆ, ವಂತಿಗೆ, ಕೊಡುಗೆ, ದಾನ ಮುಂತಾದವುಗಳನ್ನು ಸ್ವೀಕರಿಸದೆ ವಸತಿ ನಿಲಯವನ್ನು ಸುವ್ಯವಸ್ಥಿತವಾಗಿ ನಡೆಸಲು ಸಂಸ್ಥೆಯು ಬದ್ಧರಾಗಿರತಕ್ಕದ್ದು.

5. ಸರ್ಕಾರದಿಂದ ಬಿಡುಗಡೆಯಾದ ಅನುದಾನದಲ್ಲಿ ಖರೀದಿಸಿದ ಎಲ್ಲಾ ವಿಧವಾದ ಸ್ಥಿರ ಹಾಗೂ ಚರಾಸ್ತಿಗಳ ದಾಖಲೆಗಳ ಸಮೇತ ಸರ್ಕಾರವು ಬಯಸಿದ ಕೂಡಲೇ ಹಿಂತಿರುಗಿಸಲು ಸಂಸ್ಥೆಯು ಬದ್ಧವಾಗಿರತಕ್ಕದ್ದು.

6. ಅನುದಾನದ ಬಗ್ಗೆ ಲೆಕ್ಕ ಪತ್ರಗಳನ್ನು ಸುವ್ಯವಸ್ಥಿತವಾಗಿ ನಿರ್ವಹಿಸತಕ್ಕದ್ದು ಹಾಗೂ ಇಲಾಖೆಯ ಅಧಿಕಾರಿಗಳು ಸಂಸ್ಥೆಯ ತನಿಖೆಗೆ ಬಂದಾಗ ಅಥವಾ ಅನಿರೀಕ್ಷಿತ ಬೇಟಿ ನೀಡಿದಾಗ ಲೆಕ್ಕಪತ್ರ ದಾಖಲೆಗಳನ್ನು ಪಾಲಿಸಲು ಸಂಸ್ಥೆಯು ಬದ್ಧವಾಗಿರತಕ್ಕದ್ದು.

7. ಸರ್ಕಾರವು ಕಾಲಕಾಲಕ್ಕೆ ಹೊರಡಿಸುವ ಸುತ್ತೋಲೆಗಳು, ಸೂಚನೆಗಳು ಹಾಗೂ ಆದೇಶಗಳನ್ನು ಪಾಲಿಸಲು ಸಂಸ್ಥೆಯು ಬದ್ಧವಾಗಿರತಕ್ಕದು.

8. ಸಂಸ್ಥೆಯು ಅನುದಾನವನ್ನು ಅಂಗವಿಕಲ ಮಹಿಳೆಯರ ವಸತಿ ನಿಲಯದ ನಿರ್ವಹಣೆಗೆ ಮಾತ್ರ ಉಪಯೋಗಿಸುತ್ತೇವೆ. ಯೋಜನೆಯಲ್ಲಿದ್ದಂತೆ ಕಾರ್ಯಕ್ರಮಗಳನ್ನು ಸೇವೆಗಳನ್ನು ಯಶಸ್ವಿಯಾಗಿ ನಡೆಸುತ್ತೇವೆಂದು ಹಾಗೂ ಈ ಬಗ್ಗೆ ವರದಿಯನ್ನು ಕಾಲಕಾಲಕ್ಕೆ ಇಲಾಖೆಗೆ ಒದಗಿಸುತ್ತೇವೆ ಎಂದು ಪ್ರಮಾಣಿಕರಿಸತಕ್ಕದ್ದು.

9. ವಸತಿ ನಿಲಯದಲ್ಲಿ ಸರ್ಕಾರದ ಆದೇಶ ಸಂಖ್ಯೆ: ಮಮಇ:484:ಪಿಹೆಚ್‌ಪಿ:2003, ದಿನಾಂಕ:.5-03-04 ರಲ್ಲಿ ತಿಳಿಸಿರುವಂತೆ ಕನಿಷ್ಠ ಸೌಲಭ್ಯಗಳನ್ನು ಹೊಂದಿರುವಂತಹ ಕಟ್ಟಡವನ್ನು ಸ್ವಯಂ ಸೇವಾ ಸಂಸ್ಥೆಗಳು ಕಡ್ಡಾಯವಾಗಿ ಹೊಂದಿರತಕ್ಕದ್ದು.

ಆಯ್ಕೆಯಾದ ಸ್ವಯಂ ಸೇವಾ ಸಂಸ್ಥೆಯು ಇಲಾಖೆಯೊಂದಿಗೆ ಒಪ್ಪಂದವನ್ನು ಛಾಪಾ ಕಾಗದದಲ್ಲಿ ಷರತ್ತುಗಳೊಂದಿಗೆ ಮಾಡತಕ್ಕದ್ದು.

(ಪಾರ್ವತಿ ಕೇಶವಚಾರ್)
ಸರ್ಕಾರದ ಉಪ ಕಾರ್ಯದರ್ಶಿ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಸರ್ಕಾರಿ ಆದೇಶ ಸಂ: ಮಮಇ:145:ಪಿಹೆಚ್‌ಪಿ:2006(2):ಬೆಂಗಳೂರು ದಿ: 29-7-2006

### ಅನುಬಂಧ - 2

### ವಸತಿ ನಿಲಯ ಒಂದಕ್ಕೆ ಬೇಕಾದ ವಾರ್ಷಿಕ ಅಂದಾಜು ವೆಚ್ಚ

| ಕ್ರಮ ಸಂ | ವಿವರ | | | | |
|---|---|---|---|---|---|
| 1. | ಸಿಬ್ಬಂದಿ ವೆಚ್ಚ | | ವಿದ್ಯಾರ್ಹತೆ | ಮಾಸಿಕ | ವಾರ್ಷಿಕ |
| | ಅಧೀಕ್ಷಕರು (ಆಡಳಿತಾಧಿಕಾರಿ) | 01 | ಪದವೀಧರರು | 6000 | 72000 |
| | ಮೆಟ್ರನ್ (ರಾತ್ರಿ ಕೆಲಸ ನಿರ್ವಹಣೆ) | 01 | ಪಿ.ಯು.ಸಿ. | 4000 | 48000 |
| | ಅಡಿಗೆಯವರು | 02 | 7ನೇ ತರಗತಿ | 3000 | 72000 |
| | ಸ್ವೀಪರ್ ಕಮ್ ಸ್ಕಾವೆಂಜರ್ | 02 | 5ನೇ ತರಗತಿ | 2500 | 60000 |
| | ಸೇವಕ | 01 | 7ನೇ ತರಗತಿ | 2500 | 30000 |
| | ರಕ್ಷಕ | 02 | 5ನೇ ತರಗತಿ | 3000 | 60000 |
| | ಒಟ್ಟು | | | 21000 | 342000 |
| 2. | ಆವರ್ತಕ ವೆಚ್ಚ<br>ಕಟ್ಟಡ ಬಾಡಿಗೆ (ಜಿಲ್ಲೆಗಳಲ್ಲಿ ರೂ. 10000 ಅಥವಾ PWD ಇವರಿಗೆ ನಿಗದಿಪಡಿಸಿದಂತೆ ಯಾವುದು ಕಡಿಮೆಯೋ ಅದು) ಬೆಂಗಳೂರು ನಗರದಲ್ಲಿ ರೂ. 25000 ಆಹಾರ ಭತ್ಯೆ ಪ್ರತಿ ವಿದ್ಯಾರ್ಥಿಗಳ ಸಂಖ್ಯೆಗನುಗುಣವಾಗಿ ತಿಂಗಳಿಗೆ ರೂ. 400 ರಂತೆ | 120000 | 300000 | | 200000 |
| | ಒಟ್ಟು | | | 120000 | 300000 |
| 3. | ಗ್ರಂಥಾಲಯ ವೆಚ್ಚ ವರ್ಷಕ್ಕೆ (ದಿನಪತ್ರಿಕೆ ಮತ್ತು ನಿಯತಕಾಲಿಕೆಗಳು) | | | | 1000 |
| | ಸಾದಿಲ್ವಾರು ಹಾಗೂ ಇತರ ವೆಚ್ಚ | | | | 6000 |
| | ಒಟ್ಟು | | | | 7000 |
| 4. | ಅನಾವರ್ತಕ ವೆಚ್ಚ<br>ಹಾಸಿಗೆ, ಹೊದಿಕೆ 2, ರಗ್ಗು 1, ದಿಂಬು ಮತ್ತು ದಿಂಬಿನ ಹೊದಿಕೆ 1, (ಪ್ರತಿ ಮೂರು ವರ್ಷಕ್ಕೊಮ್ಮೆ) | | | | 50000 |
| | ಮಂಚಗಳು (10 ವರ್ಷಕ್ಕೊಮ್ಮೆ) | | | | 75000 |
| | ದೂರವಾಣಿ ಸಂಪರ್ಕ | | | | 3000 |
| | ಪಾತ್ರೆಗಳು ಮತ್ತು ಇತರೆ ಅನಾವರ್ತಕ ವೆಚ್ಚ (ಕ್ರೀಡಾ ಸಾಮಗ್ರಿಗಳನ್ನು ಒಳಗೊಂಡಂತೆ) | | | | 50000 |
| | ಒಟ್ಟು | | | | 178000 |
| | ಒಂದು ವಸತಿ ನಿಲಯಕ್ಕೆ ವಾರ್ಷಿಕ | | | | 847000 |

ಟಿಪ್ಪಣಿ: ಬೆಂಗಳೂರು ನಗರದಲ್ಲಿ ಹೆಚ್ಚಿನ ಬಾಡಿಗೆ ನಿಗದಿಪಡಿಸಿರುವುದರಿಂದ ಒಂದು ಕೇಂದ್ರಕ್ಕೆ ರೂ. 1027000 ಗಳೆಂದು ಅಂದಾಜಿಸಲಾಗಿದೆ. ಸ್ವಯಂ ಸೇವಾ ಸಂಸ್ಥೆಯು ಮೇಲೆ ತಿಳಿಸಿರುವ ಸಿಬ್ಬಂದಿಗಳನ್ನು ಗೌರವಧನದ ಮೇಲೆ ನೇಮಕಾತಿ ಮಾಡುವಾಗ ಕನಿಷ್ಠ ಶೇ. 50 ರಷ್ಟು ಅಂಗವಿಕಲರನ್ನು ಕಡ್ಡಾಯವಾಗಿ ನೇಮಕಾತಿ ಮಾಡತಕ್ಕದ್ದು.

(ಪಾರ್ವತಿ ಕೇಶವಾಚಾರ್)
ಸರ್ಕಾರದ ಉಪ ಕಾರ್ಯದರ್ಶಿ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ : ಉದ್ಯೋಗಸ್ಥ ಅಂಗವಿಕಲ ಮಹಿಳೆಯರ ಮತ್ತು ವಿದ್ಯಾರ್ಥಿನಿಯರ ವಸತಿ ನಿಲಯಗಳನ್ನು ಉಳಿದ 7 ಜಿಲ್ಲೆಗಳಲ್ಲಿ ಪ್ರಾರಂಭಿಸಲು ಆಡಳಿತಾತ್ಮಕ ಮಂಜೂರಾತಿಯನ್ನು ನೀಡುವ ಬಗ್ಗೆ.

ಓದಲಾಗಿದೆ:

1. ಸರ್ಕಾರದ ಆದೇಶ ಸಂಖ್ಯೆ: ಮಮಇ:145:ಪಿಹೆಚ್‌ಪಿ:2006(2) ದಿನಾಂಕ: 29-07-2006
2. ಸರ್ಕಾರದ ಆದೇಶ ಸಂಖ್ಯೆ: ಮಮಇ:325:ಪಿಹೆಚ್‌ಪಿ:2006:ದಿನಾಂಕ:17-03-2007
3. ನಿರ್ದೇಶಕರು, ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆ ಇವರ ಏಕಕಡತ ಸಂಖ್ಯೆ: ಅಂಹಿನಾಕಇ:ಯೋ:10:2007-08.
4. ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರು ಇವರ ಅಧ್ಯಕ್ಷತೆಯಲ್ಲಿ ದಿನಾಂಕ: 22-05-2007 ರಂದು ನಡೆದ ಅಧಿಕಾರಯುಕ್ತ ಸಮಿತಿ ಸಭೆ.

### ಪ್ರಸ್ತಾವನೆ:

ಮೇಲೆ ಕ್ರಮಸಂಖ್ಯೆ: (1) ರಲ್ಲಿ ಓದಲಾದ ಆದೇಶದಲ್ಲಿ ಉದ್ಯೋಗಸ್ಥ ಅಂಗವಿಕಲ ಮಹಿಳೆಯರಿಗೆ, ಅಂಗವಿಕಲ ವಿದ್ಯಾರ್ಥಿಗಳಿಗೆ ಮತ್ತು ತರಬೇತಿ ಪಡೆಯುತ್ತಿರುವ ಅಂಗವಿಕಲರಿಗೆ ಸ್ವಯಂ ಸೇವಾ ಸಂಸ್ಥೆಗಳಿಗೆ ವಸತಿ ನಿಲಯವನ್ನು ಪ್ರಾರಂಭಿಸುವ ಯೋಜನೆಯನ್ನು ಬೆಳಗಾಂ, ಧಾರವಾಡ, ದಾವಣಗೆರೆ, ಚಿತ್ರದುರ್ಗ, ಗುಲ್ಬರ್ಗ, ರಾಯಚೂರು, ಬಾಗಲಕೋಟೆ, ಬಿಜಾಪುರ, ಉತ್ತರ ಕನ್ನಡ, ಕೋಲಾರ, ಹಾಸನ, ತುಮಕೂರು, ಮೈಸೂರು, ಶಿವಮೊಗ್ಗ, ಹಾವೇರಿ, ಗದಗ್, ಬಳ್ಳಾರಿ, ಬೆಂಗಳೂರು ನಗರ, ಬೆಂಗಳೂರು (ಗ್ರಾ), ಬೀದರ್ ಒಟ್ಟು 20 ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸಲು ಮಂಜೂರಾತಿ ನೀಡಲಾಗಿದೆ. ಸದರಿ ಆದೇಶದ ಅನುಬಂಧ-1 ರಲ್ಲಿ ಯೋಜನೆಯ ವಿವರ ಮತ್ತು ಷರತ್ತುಗಳನ್ನು ನಿಗದಿಪಡಿಸಿದ್ದು, ವಾರ್ಷಿಕ ಆವರ್ತಕ ವೆಚ್ಚ ರೂ. 6,69,000/- ಹಾಗೂ ಅನಾವರ್ತಕ ವೆಚ್ಚ ರೂ. 1,78,000/- ಒಟ್ಟು ರೂ. 8,47,000/- ಅನುದಾನವನ್ನು ನಿಗದಿಪಡಿಸಲಾಗಿದೆ.

ಮೇಲೆ ಕ್ರಮಸಂಖ್ಯೆ (2) ರಲ್ಲಿ ಓದಲಾದ ಆದೇಶದಲ್ಲಿ ದಿ: 29-07-2006ರ ಅನುಬಂಧ-1 ರಲ್ಲಿ ಮೊದಲಿದ್ದ ಷರತ್ತು ಮತ್ತು ನಿಬಂಧನೆಗಳನ್ನು ಪರಿಷ್ಕರಿಸಲಾಗಿರುತ್ತದೆ.

ಮೇಲೆ ಕ್ರಮಸಂಖ್ಯೆ (3) ರಲ್ಲಿ ಓದಲಾದ ಏಕಕಡತದಲ್ಲಿ ನಿರ್ದೇಶಕರು ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆ ಇವರು ಯೋಜನೆಯನ್ನು ಉಳಿದ 7 ಜಿಲ್ಲೆಗಳಾದ ಮಂಡ್ಯ, ಚಿಕ್ಕಮಗಳೂರು, ದಕ್ಷಿಣ ಕನ್ನಡ ಜಿಲ್ಲೆ, ಕೊಡಗು, ಚಾಮರಾಜನಗರ ಕೊಪ್ಪಳ ಮತ್ತು ಉಡುಪಿ ಜಿಲ್ಲೆಗೆ ವಿಸ್ತರಿಸುವಂತೆ ಪ್ರಸ್ತಾಪಿಸಿರುತ್ತಾರೆ.

ಹೆಚ್ಚಿನ ಅನುದಾನ ಕೋರದೇ, 2007-08ನೇ ಸಾಲಿನ ಆಯವ್ಯಯದ ಮಿತಿಯಲ್ಲಿ ಪ್ರಸ್ತಾಪಿತ 7 ಜಿಲ್ಲೆಗಳಲ್ಲಿ ವಿಸ್ತರಿಸುವ ಪ್ರಸ್ತಾವನೆಯನ್ನು ದಿನಾಂಕ: 22-05-2007ರ ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ರಚಿತವಾದ ಅಧಿಕಾರಯುತ ಸಮಿತಿಯಲ್ಲಿ ಅನುಮೋದಿಸಲಾಗಿದೆ.

ಈ ಹಿನ್ನೆಲೆಯಲ್ಲಿ ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲನೆ ಮಾಡಿ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಮಮಇ:244:ಪಿಹೆಚ್‌ಪಿ:2006(4) ಬೆಂಗಳೂರು.ದಿನಾಂಕ: 25-06-2007**

ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯಿಂದ ಉದ್ಯೋಗಸ್ಥ ಅಂಗವಿಕಲ ಮಹಿಳೆಯರ ಮತ್ತು ವಿದ್ಯಾರ್ಥಿನಿಯರ ವಸತಿ ನಿಲಯಗಳನ್ನು ಈ ಕೆಳಕಂಡ 7 ಜಿಲ್ಲೆಗಳಲ್ಲಿ ಪ್ರಾರಂಭಿಸಲು 2007-08ನೇ ಸಾಲಿನ ಆಯವ್ಯಯದ ಮಿತಿಯಲ್ಲಿ ಅನುಷ್ಠಾನಗೊಳಿಸುವ ಷರತ್ತಿಗೊಳಪಟ್ಟಂತೆ ಸರ್ಕಾರದ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಲಾಗಿದೆ.

1) ಮಂಡ್ಯ, 2) ಚಿಕ್ಕಮಗಳೂರು, 3) ದಕ್ಷಿಣ ಕನ್ನಡ ಜಿಲ್ಲೆ, 4) ಕೊಡಗು, 5) ಚಾಮರಾಜನಗರ, 6) ಕೊಪ್ಪಳ, 7) ಉಡುಪಿ

ಉದ್ಯೋಗಸ್ಥ ಅಂಗವಿಕಲ ಮಹಿಳೆಯರ ಮತ್ತು ವಿದ್ಯಾರ್ಥಿನಿಯರ ವಸತಿ ನಿಲಯಗಳನ್ನು ಪ್ರಾರಂಭಿಸುವುದಕ್ಕಾಗಿ ಸ್ವಯಂ ಸೇವಾ ಸಂಸ್ಥೆಗಳನ್ನು ಆಯ್ಕೆ ಮಾಡಲು ದಿನಾಂಕ: 29-07-2006 ಹಾಗೂ ದಿ: 17-03-2007ರ ಸರ್ಕಾರಿ ಆದೇಶದ ಮಾರ್ಗಸೂಚಿ / ಮಾನದಂಡಗಳನ್ನು ಅನ್ವಯಿಸತಕ್ಕದ್ದು.

ಈ ಯೋಜನೆಗೆ ಸಂಬಂಧಿಸಿದ ವೆಚ್ಚವನ್ನು ಲೆಕ್ಕಶೀರ್ಷಿಕೆ 2235-02-101-0-50 ಯೋಜನೇತರ ಅಡಿ ಲಭ್ಯವಿರುವ ಆಯವ್ಯಯದಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

(ವಿ. ಶಿವಕುಮಾರ್)

ಸರ್ಕಾರದ ಅಧೀನ ಕಾರ್ಯದರ್ಶಿ

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## GOVERNMENT OF KARNATAKA

Sub: Physically Handicapped persons Financial Assistance for purchase of Aids/ Gadgets revision of Scheme and rules.

Read: 1) G.O.No.PHS 105 SWB 63, dt.20-7-64, read with Agenda No1 PSW 230 SPH 69, dt.24-12-70.

2) G.O.No.SWL 129 PHP 78, dt.3.6.78.

3) G.O.No.SWL 35 PHP 82, dt.4.8.82.

4) G.O.No.SWL 81 PHP 82, dt.6-12-82

5) G.O.No.SWL 11:PHP 83, dt.6-5-83.

6) Letter No.:DWD:PLAN:PAC/91-92 dt.24.7.91 from the Director, Disabled Welfare Bangalore.

**PREAMBLE:**

In the G.O. dt. 20-7-64 read at (1) above, Government have sanctioned the Scheme of Financial Assistance to Physically Handicapped persons for purchase of Aids/Gadgets was sanctioned. This was further modified in (1) G.O.No.SWL 81 PHP 82, dt. 6.12-82. (ii) G.O.No.SWL 35 PHP 82, dt.4-8-82 (iii) G.O.No.SWL 11 dt.6.5.83.

In the letter read at (6) above, the Director, Disabled Welfare, Bangalore has sent proposals for revision of Scheme and rules in order to prevent mis-use of the Scheme, as the Scheme was sanctioned as long back as 1978. A budget provision of Rs.52.50 lakhs has also been made under the Head of Account 2235-02-11-0-72 Scholarships and Financial Assistance to Physically Handicapped persons under non-plan during the current financial year.

The Director of Disabled Welfare has therefore requested to issue the revised Scheme of Assistance to the Physically Handicapped persons for purchase of Aids/Gadgets in supercession of all the earlier Government Orders.

The proposal of the Director of Disabled Welfare has been considered by Government

**GOVERNMENT ORDER NO. SWL 199 PHP 91 BANGALORE**
**DATED: 5-2-1992.**

In super cession of all the Orders regarding Scheme of Financial Assistance to Physically Handicapped persons for purchase of Aids/Gadgets, Government are pleased to approve the revised Scheme of Financial Assistance of Physically Handicapped persons for purchase of Aids/ Gadgets as detailed in the Annexure appended to this Govt. Order.

This order issued with the concurrence of IFA Vide U.O. Note No.SWL 194 IFA 91, dt. 5-9-91.

By Order and in the name of the Governor of Karnataka
Sd/-
(S.K.SRIKANTAIAH)
Under Secretary to Government
Social Welfare and Labour Department.

## SCHEME OF ASSISTANCE TO THE DISABLED PERSONS FOR PURCHASE OF AIDS/APPLIANCES-REVISED SCHEME

**1) INTRODUCTION:**

Inspite of the absence of precise data, according to the experts in the field, it is clear that there are about 4 to 5% of Disabled persons in Karnataka, many of them come from low income group. Physical disability restricts their mobility and opportunities for social and economic rehabilitation with the application of modern technology, there have emerged a number of aids and appliances which can reduce the effects of disabilities and enhance the Social economic potential of the handicapped. Availability and use of aids like Tricycles-both ordinary and motorised, Wheel chair, Artificial Limbs, Crutches etc., can greatly improve the mobility of a Physically handicapped individual. Similarly with the help of Hearing Aid, persons with hearing impairment can be helped to carry on many activities of his daily life. Low vision aids can help the persons substancially with reduced vision to read, print and undertake other activities leading to their rehabilitation. However a large number of Physically handicapped persons are deprived of the benefit of these appliances because of their inability to afford for these comparatively costly aids.

The existing Scheme of Financial Assistance to Physically Handicapped introduces in G.O.No.SWL 129 PHP 78, dt. 03-06-1978, read with No.PSW/230/SPH/69. Dt. 24-12-1970, G.O.No.SWL 35 PHP 82, Dt. 04-08-82 and No. SWL 11 PHP 83, dt. 06-05-1983 needs to be further revised widening the scope of the eligibility criteria and imposing required conditions, so as to both to liberalise and decentralise the sanctions of these aids and also to prevent misuse by affluent class, and to enable the poorest of the poor to avail these benefits easily. Hence the Scheme is revised as follows:

**2) OBJECTIVES:**

The main objectives of this Scheme is to assist the needy Physically handicapped persons in procuring quality, durable and Scientifically manufactured modern standard aids and gadgets which can promote their physical, Social psychological economic rehabilitation and ultimate integration in the society.

**SCOPE:**

The Scheme will be applicable to all categories of Disabled persons who fulfil the eligibility conditions herein after prescribed. Assistance will be given for the purchase of aids and gadgets that may help in increasing the mobility or the capacity of the handicapped for physical, Social and economic rehabilitation.

**DEFINITIONS:**

Following will be broad definitions for Physically Handicapped.

**THE BLIND:**

The blind are those who suffer from either of the following conditions:

a) Total absence of sight.

b) Visual/Acquity not exceeding 6/60 or 20/200 (snellen) in the better eye with corrections lenses:

c) Limitation of the fields of vision subtending an angle of 20 degree or worse.

**THE PARTIALLY SIGHTED:**

Visual/acquity between 20/200 and 70/200 (snellen) in the better eye after best possible corrections.

**THE DEAF:**

The Deaf are those in whom the sense of hearing is nonfunctional for ordinary purposes of life. They do not hear/understand sounds at all even with amplified speech. The case included in this category will be those having hearing loss more than 90 decibles in the better ear (Profound impairment) or total % loss of hearing in both ears.

**THE PARTIALLY HEARING HANDICAPPED:**

The partially hearing are those falling under any one of the categories indicated below:

| CATEGORY | HEARING ACQUITY |
|---|---|
| Mild impairment | More than 30 but not more than 45 decibles in better ear. |
| Serious impairment | More than 45 but not more than 60 decibles in better ear. |
| Severe Impairement | More than 60 but not more than 90 decibles in better ear. |

**THE ORTHOPAEDICALLY HANDICAPPED:**

The Orthopaedically handicapped are these who have a physical defect or deformity which causes interference with the normal functioning of the bones, muscles and joints, having more than 40% deformity.

**ELIGIBILITY:**

The following persons will be eligible for assistance:

i) A disabled person who is a resident of Karnataka by birth or who has been residing in Karnataka for not less than 10 years (in support of this the applicant should produce a certificate from the Tahsildar or produce the educational certificate indicating that he has studied in Karnataka for not less than 10 years)

ii) A person who is certified to be a disabled person by medical officer not below the rank of Orthopaedic Surgeon/ Optholomologist/Ent surgeon as in the case may be of a Govt. Hospital

iii) Persons who are employed/self employed or young disabled persons who intend to be self employed shall be given preference so that they can improve their Social and Economic conditions provided that his/her family income does not exceed Rs. 8000/- PA.

   a) Assistance to Physically Handicapped persons whose family income exceeds Rs. 8000/- per annum but does not exceed Rs. 12,000/- p.a. shall be limited to 50% of the cost of such aid/gadgets.

   b) No financial assistance shall be given under this scheme to persons whose family income from all sources exceeds Rs. 12,000/- per annum.

iv) Person who have not received assistance from Govt./Local bodies and non-Official organisation or under Aids/Schemes from any organisations for the same purpose shall only be eligible. (An affidavit in support of this should be enclosed in the formal at Annexure IV to the application).

v) Family income means the income of the applicant and his parents and if either of the parent is dead his guardian as recorded in the income certificate issued by the Tahsildar of the Taluk in which the Physically Handicapped person resides. Every application shall be accomplished by a certificate of income issued by the Tahsildar regarding the family income.

The family means the individual, his spouse and legitimate children. It includes parents where the individual is dependent on his parents.

Family income means income of all the members of the family from all sources, if parents are no more, then the income of guardian. The income of the guardian means the income of his spouse including the income if any, of the applicant. The criteria of income adopted in the rules for grant of monthly maintenance allowance is the same.

vi) The need for the aid/gadget shall be determined on the basis of medical report issued by a specialist Medical Officer like an Orthopaedic Surgeon/Ent Surgeon; attached to a Govt. Hospital suggesting the views of particular type of aid/ gadgets. such report shall be attached to the application in original.

**6) SANCTIONING AUTHORITY:**

The Assistant director, Women and Child Development Dept. of the concerned District, in cases where the quantum of Financial Assistance to be sanctioned does not exceed Rs. 2000/- and the Director of Welfare of Disabled, in cases where the quantum of Financial Assistance exceed Rs. 2000/- but does not exceeded Rs. 10,000/-

Mere submission of application with a Medical Certificate about the disability does not confer any right of financial assistance under this scheme. The sanctioning authority deserves the right to consider the case depending upon the nature of disability, the Socio-economic position of the beneficiary and the purpose for which it is proposed to be used.

**7) QUANTUM OF ASSISTANCE:**

1) Only those aids and appliances which do not cost less than Rs. 50/- and more than Rs. 10,000/- are covered under this scheme. These limits will be applied to individual items and aids and where more than one aid is required, giving of the same will be permissible and the quantum shall not exceed the limit.

| Total Income | Amount of Assistance |
|---|---|
| 1) Income upto Rs.6000/- per annum. | Full cost of aid/gadgets. |
| 2) Income above Rs. 8000/- but less than Rs. 12,000/- per annum. | 50% of the cost of the aid. |

Types of aids/appliances for which financial assistance could be given.

| Type of Handicap | Aid to be given |
|---|---|
| a) Orthopaedically Handicapped | i) Orthotic and prosthetic aids.<br>ii) Ordinary hand operated Tricyles, wheel chairs. |
| b) Hearing handicapped | Hearing aids. |
| c) Blind | i) Braille watch.<br>ii) White cane.<br>iii) Braille kit. |

8) **EXCEPTIONS:**

i) Motorised Tricyless can be given under special circumstances, at the discrition of the sanctioning authority provided the beneficiaries shall bear 50% of the cost of the Motorisedd Tricycles. The beneficiaries intending to have motorised tricycles should be a self employed person with severe disability in mobility and he should remit 50% of his contribution through a crossed demand draft payable to the Director, Welfare of Disabled on intimation of sanction.

ii) The packing and transportation charges etc. shall be borne by the beneficiary.

9) **MODE OF PAYMENT:**

Payment shall be made directly to the firm supplying the aid/gadgets.

10) **CONDITIONS TO BE OBSERVED:**

i) The sanctioning authority shall maintain a register in Annexure-I and follow the rules relating to incurring expenditure from time to time.

ii) The application shall be as per Annexure-II and the Medical Certificate shall be as per Annexure-III.

11) The Scheme shall be implemented subject to availability of funds from time to time. The application remaining un sanctioned at the end of each financial year shall lapse and the Assistant Director at the District level should not exceed the budget allotment given by the Director in each financial year and no applicant shall normally be entitled to assistance more than once under these rules. In exceptional cases where assistance is sought to be given for the second time, prior approval of Govt. shall be necessary.

Sd/-
(S.K.SRIKANTAIAH)
Under Secretary to Government
Social Welfare & Labour Department.

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಎಸ್.ಎಸ್.ಎಲ್.ಸಿ. ಹಾಗೂ ನಂತರ ವ್ಯಾಸಂಗ ಮಾಡುತ್ತಿರುವ ಅಂಧ ವಿದ್ಯಾರ್ಥಿಗಳಿಗೆ ಟಾಕಿಂಗ್ ಲ್ಯಾಪ್‌ಟಾಪ್ ನೀಡುವ ಬಗ್ಗೆ.

ಓದಲಾಗಿದೆ: ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರ ಪತ್ರ ಸಂಖ್ಯೆ: ವಿಹಿನಾಸಇ/ಯೋ.ಶಾ/ಹೊಸ ಯೋಜನೆ/ ಲ್ಯಾಪ್‌ಟಾಪ್/21/2013–14/142, ದಿನಾಂಕ: 3.4.2014.

ಪ್ರಸ್ತಾವನೆ:

2014–15ನೇ ಸಾಲಿನ ಆಯವ್ಯಯದಲ್ಲಿ ಹೆಚ್ಚು ಜನ ಅಂಧ ವಿಕಲಚೇತನ ವಿದ್ಯಾರ್ಥಿಗಳು ಇತ್ತೀಚಿನ ತಂತ್ರಜ್ಞಾನ ಮತ್ತು ತಂತ್ರಾಂಶದ ಉಪಯೋಗದಿಂದ ಉನ್ನತ ಶಿಕ್ಷಣವನ್ನು ಹೊಂದಲು ಅನುಕೂಲವಾಗುವಂತೆ ಟಾಕಿಂಗ್ ಲ್ಯಾಪ್‌ಟಾಪ್ ನೀಡುವ ಯೋಜನೆಯನ್ನು ಘೋಷಿಸಲಾಗಿದೆ. ಎಸ್.ಎಸ್.ಎಲ್.ಸಿ. ಹಾಗೂ ನಂತರ ವ್ಯಾಸಂಗ ಮಾಡುತ್ತಿರುವ ಅಂಧ ವಿದ್ಯಾರ್ಥಿಗಳಿಗೆ ಶಿಕ್ಷಣವನ್ನು ಉತ್ತೇಜಿಸುವ ಸಲುವಾಗಿ ಟಾಕಿಂಗ್ ಲ್ಯಾಪ್‌ಟಾಪ್‌ನ್ನು ನೀಡುವ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರು ಮೇಲೆ ಓದಲಾದ ದಿನಾಂಕ: 3.4.2014 ರ ಪತ್ರದಲ್ಲಿ ಕೋರಿರುತ್ತಾರೆ.

ಮೇಲಿನ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 113 ಪಿಎಚ್‌ಪಿ 2014, ಬೆಂಗಳೂರು, ದಿನಾಂಕ: 3.7.2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಹೆಚ್ಚು ಜನ ಅಂಧ ವಿಕಲಚೇತನ ವಿದ್ಯಾರ್ಥಿಗಳು ಇತ್ತೀಚಿನ ತಂತ್ರಜ್ಞಾನ ಮತ್ತು ತಂತ್ರಾಂಶದ ಉಪಯೋಗದಿಂದ ಉನ್ನತ ಶಿಕ್ಷಣವನ್ನು ಪಡೆಯುವುದಕ್ಕೆ ಪ್ರೋತ್ಸಾಹಿಸಲು ಟಾಕಿಂಗ್ ಲ್ಯಾಪ್‌ಟಾಪ್ ನೀಡಲು ಆಡಳಿತಾತ್ಮಕ ಅನುಮೋದನೆ ನೀಡಿದೆ.

ಈ ಯೋಜನೆಗೆ ತಗಲುವ ವೆಚ್ಚ ರೂ.400.00 ಲಕ್ಷಗಳನ್ನು ಲೆಕ್ಕಶೀರ್ಷಿಕೆ 2235-02-101-0-52-100 ಧನಸಹಾಯ (ಯೋಜನೆ) ರಡಿಯಲ್ಲಿ ಒದಗಿಸಿರುವ ಅನುದಾನದಲ್ಲಿ ಭರಿಸತಕ್ಕದ್ದು.

ಈ ಆದೇಶಕ್ಕೆ ಲಗತ್ತಿಸಿರುವ ಮಾರ್ಗಸೂಚಿಗಳ ಪ್ರಕಾರ ಯೋಜನೆಯನ್ನು ಅನುಷ್ಠಾನಗೊಳಿಸುವುದು.



. . . . 2

ಈ ಆದೇಶವನ್ನು ಕ್ರಮವಾಗಿ ಆರ್ಥಿಕ ಇಲಾಖೆ, ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ. ಆಇ 482 ವೆಚ್ಚ-3/2014, ದಿನಾಂಕ: 19.6.2014 ಹಾಗೂ ಪಿಡಿ 13 ಐಪಿಎಂ 2014, ದಿನಾಂಕ: 29.5.2014 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಪ್ರಕಾಶ ಹಿರೇಮಠ)
ಸರ್ಕಾರದ ಅಧೀನ ಕಾರ್ಯದರ್ಶಿ-2
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.
ಹಾಗೂ ವಿಕಲಚೇತನರ ಮತ್ತು ಹಿರಿಯ
ನಾಗರಿಕರ ಸಬಲೀಕರಣ ಇಲಾಖೆ
ದೂರವಾಣಿ ಸಂಖ್ಯೆ:22032240.

ಇವರಿಗೆ:-

1. ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು.
2. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು.
3. ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಬೆಂಗಳೂರು.
4. ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನಸೌಧ.
5. ನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ಬೆಂಗಳೂರು.
6. ಆಂತರಿಕ ಆರ್ಥಿಕ ಸಲಹೆಗಾರರು,ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು.
7. ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವೆಚ್ಚ - 3 & 9).
8. ನಿರ್ದೇಶಕರು, ಯೋಜನಾ ಇಲಾಖೆ (ಪಿ.ಎಂ.ಐ. ವಿಭಾಗ).
9. ಎಲ್ಲಾ ಜಿಲ್ಲೆಯ ಉಪ ನಿರ್ದೇಶಕರು/ ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ (ನಿರ್ದೇಶಕರ ಮುಖಾಂತರ).
10. ಎಲ್ಲಾ ಜಿಲ್ಲೆಯ ಅಂಗವಿಕಲರ ಕಲ್ಯಾಣಾಧಿಕಾರಿಗಳು, ಉಪ ನಿರ್ದೇಶಕರ ಕಛೇರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ (ನಿರ್ದೇಶಕರ ಮುಖಾಂತರ).
11. ಶಾಖಾ ರಕ್ಷಾ ಕಡತ/ ಹೆಚ್ಚುವರಿ ಪ್ರತಿ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 113 ಪಿಎಚ್‌ಪಿ 2014, ದಿನಾಂಕ: 3.7.2014 ರ ಆದೇಶಕ್ಕೆ ಮಾರ್ಗಸೂಚಿಗಳು**

1. ಅಂಥ ವ್ಯಕ್ತಿಗಳು ಭಾರತದ ಪ್ರಜೆಯಾಗಿರಬೇಕು ಮತ್ತು ಕರ್ನಾಟಕದಲ್ಲಿ ಕನಿಷ್ಠ 10 ವರ್ಷಗಳು ವಾಸವಾಗಿರುವ ಬಗ್ಗೆ ತಹಸೀಲ್ದಾರರಿಂದ ಪ್ರಮಾಣ ಪತ್ರ ಸಲ್ಲಿಸಬೇಕು.
2. ಎಸ್.ಎಸ್.ಎಲ್.ಸಿ. ಹಾಗೂ ನಂತರದ ವ್ಯಾಸಂಗ ಮಾಡುತ್ತಿರುವ ಅಂಥ ವಿದ್ಯಾರ್ಥಿಗಳಿಗೆ ಮಾತ್ರ ಲ್ಯಾಪ್‌ಟಾಪ್ ನೀಡಲಾಗುವುದು.
3. ಲ್ಯಾಪ್‌ಟಾಪ್ ಪಡೆಯುವ ವಿದ್ಯಾರ್ಥಿಯು ವ್ಯಾಸಂಗ ಮಾಡುತ್ತಿರುವ ಕಾಲೇಜು/ ಸಂಸ್ಥೆಯ ಮುಖ್ಯಸ್ಥರಿಂದ ದೃಢೀಕರಣ ಶಿಫಾರಸ್ಸಿನೊಂದಿಗೆ ನಿಗಧಿತ ನಮೂನೆಯಲ್ಲಿ ಅರ್ಜಿಯನ್ನು ಸಲ್ಲಿಸುವುದು
4. ಜಿಲ್ಲಾ ಮಟ್ಟದಲ್ಲಿ ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು, ಅಂಧರ ಕ್ಷೇತ್ರದಲ್ಲಿ ಕಾರ್ಯನಿರ್ವಹಿಸುತ್ತಿರುವ ಸ್ವಯಂ ಸೇವಾ ಸಂಸ್ಥೆ ಒಬ್ಬ ಮುಖ್ಯಸ್ಥರ ಅಧ್ಯಕ್ಷತೆಯಲ್ಲಿ ರಚಿಸಲಾಗುವ ಸಮಿತಿಯಲ್ಲಿ ಫಲಾನುಭವಿಯನ್ನು ಆಯ್ಕೆ ಮಾಡುವುದು.
5. ಈ ಯೋಜನೆಯ ಸೌಲಭ್ಯ ಪಡೆಯಲು ಯಾವುದೇ ಆದಾಯ ಮಿತಿಯಿರುವುದಿಲ್ಲ.
6. ಸರ್ಕಾರ ನೀಡುವ ಲ್ಯಾಪ್‌ಟಾಪ್‌ನ್ನು ಯಾವುದೇ ಕಾರಣಕ್ಕೆ ಪರಬಾರೆ ಮಾಡಬಾರದು, ಮಾಡಿದ್ದು ಕಂಡುಬಂದಲ್ಲಿ ಅಂತಹವರ ಮೇಲೆ ಕ್ರಮ ಜರುಗಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
7. ಲ್ಯಾಪ್‌ಟಾಪ್‌ನ್ನು ಪಡೆಯುವ ವಿದ್ಯಾರ್ಥಿಯು ರೂ.100/- ಗಳ ಛಾಪಾಕಾಗದದಲ್ಲಿ ಮುಚ್ಚಳಿಕೆ ಬರೆದು ಕೊಡುವುದು.
8. ಲ್ಯಾಪ್‌ಟಾಪ್‌ನ್ನು ಪಡೆಯುವ ವಿದ್ಯಾರ್ಥಿಯು ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳಿಗೆ ನಿಗಧಿತ ನಮೂನೆಯಲ್ಲಿ ಅರ್ಜಿಯನ್ನು ಸಲ್ಲಿಸುವುದು.
9. ಈ ಸೌಲಭ್ಯವನ್ನು ಪಡೆಯುವ ವಿಕಲಚೇತನ ವಿದ್ಯಾರ್ಥಿಗಳು ಶೇ.40% ಕ್ಕಿಂತ ಹೆಚ್ಚು ದೃಷ್ಟಿದೋಷವುಳ್ಳವಾಗಿರಬೇಕು.
10. ಅಂಗವಿಕಲರ ಅಧಿನಿಯಮದಲ್ಲಿ ಸೂಚಿಸಿರುವ ಹಾಗೂ ವೈದ್ಯಕೀಯ ಪ್ರಾಧಿಕಾರದಿಂದ ನೀಡಿರುವ ಗುರುತಿನ ಚೀಟಿಯೊಂದಿಗೆ ಶಿಫಾರಸ್ಸು ಮಾಡಿರುವ ದೃಢೀಕೃತ ವೈದ್ಯಕೀಯ ಪ್ರಮಾಣ ಪತ್ರಗಳನ್ನು ಸಲ್ಲಿಸಬೇಕು.
11. ಲ್ಯಾಪ್‌ಟಾಪ್‌ನ್ನು ವಿದ್ಯಾರ್ಥಿಗಳು ಶಿಕ್ಷಣದ ಸಲುವಾಗಿಯೇ ಉಪಯೋಗಿಸತಕ್ಕದ್ದು.
12. ಈ ಯೋಜನೆಯನ್ನು ಅನುಷ್ಠಾನಗೊಳಿಸುವ ಅಧಿಕಾರವು ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳದ್ದಾಗಿರುತ್ತದೆ.
13. ಲ್ಯಾಪ್‌ಟಾಪ್‌ನ್ನು ಒಂದು ವಿದ್ಯಾರ್ಥಿಗೆ ಜೀವಿತ ಕಾಲದಲ್ಲಿ ಒಂದು ಬಾರಿ ಮಾತ್ರ ಸೌಲಭ್ಯ ಪಡೆಯಲು ಅರ್ಹರಾಗಿರುತ್ತಾರೆ. ಬೇರೆ ಇಲಾಖೆಗಳು ಅಥವಾ ಸಂಘ ಸಂಸ್ಥೆಗಳಿಂದ ಲ್ಯಾಪ್‌ಟಾಪ್‌ಅನ್ನು ಪಡೆದಿದ್ದಲ್ಲಿ ಅಂತಹವರು ಅರ್ಹರಾಗಿರುವುದಿಲ್ಲ.
14. ಲ್ಯಾಪ್‌ಟಾಪ್‌ನ್ನು, ಸ್ವೀಕರಿಸಿರುವ ಅರ್ಜಿಗಳ ಜೇಷ್ಠತೆ ಅನುಸಾರ ವಿತರಿಸಲಾಗುವುದು.
15. ನಿಯತ ಕಾಲಿಕ ವಿದ್ಯಾರ್ಥಿಗಳು ಮಾತ್ರ ಮೇಲಿನ ಯೋಜನೆಯ ಸೌಲಭ್ಯ ಪಡೆಯಲು ಅರ್ಹರಿರುತ್ತಾರೆ.

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಕುಟುಂಬದ ವಾರ್ಷಿಕ ವರಮಾನ ರೂ.2.00 ಲಕ್ಷಗಳಿಗಿಂತ ಕಡಿಮೆ ಇರುವ 20 ರಿಂದ 60 ವರ್ಷದೊಳಗಿನ ತೀವ್ರತರನಾದ ದೈಹಿಕ ವಿಕಲಚೇತನರಿಗೆ ಜೀವಿತ ಕಾಲದಲ್ಲಿ ಒಂದು ಬಾರಿ ಯಂತ್ರಚಾಲಿತ ದ್ವಿಚಕ್ರವಾಹನವನ್ನು ನೀಡುವ ಬಗ್ಗೆ.

ಓದಲಾಗಿದೆ: ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರ ಪತ್ರ ಸಂಖ್ಯೆ:ವಿಹಿನಾಸಇ:ಯೋ.ಶಾ:ಹೊಸ ಯೋಜನೆ: ಯಂತ್ರ.ದ್ವಿ.ವಾ:22:2013-14:207, ದಿನಾಂಕ: 11.4.2014.

2014-15ನೇ ಸಾಲಿನ ಆಯವ್ಯಯದಲ್ಲಿ ಕುಟುಂಬದ ವಾರ್ಷಿಕ ವರಮಾನ 2 ಲಕ್ಷ ರೂ.ಗಳಿಗಿಂತ ಕಡಿಮೆ ಇರುವ 20 ರಿಂದ 60 ವರ್ಷ ವಯೋಮಾನದ ತೀವ್ರತರವಾದ ದೈಹಿಕ ವಿಕಲಚೇತನರಿಗೆ ಅನುಕೂಲವಾಗುವಂತೆ ಜೀವಿತ ಕಾಲದಲ್ಲಿ ಒಂದು ಬಾರಿ ಯಂತ್ರಚಾಲಿತ ದ್ವಿಚಕ್ರ ವಾಹನವನ್ನು ನೀಡಲು ಘೋಷಿಸಲಾಗಿದೆ. ದೈಹಿಕ ವಿಕಲಚೇತನರು ಉದ್ಯೋಗ ಕೈಗೊಳ್ಳಲು ಅಥವಾ ಅವರು ಉದ್ಯೋಗ ನಿರ್ವಹಿಸುವ ಸ್ಥಳಕ್ಕೆ/ ಉನ್ನತ ಶಿಕ್ಷಣ ವ್ಯಾಸಂಗ ಮಾಡುತ್ತಿರುವ ಕಾಲೇಜುಗಳಿಗೆ ಹೋಗಿ ಬರಲು ಜೀವಿತ ಕಾಲದಲ್ಲಿ ಒಬ್ಬ ಫಲಾನುಭವಿಗೆ ಒಂದು ಬಾರಿ ಯಂತ್ರಚಾಲಿತ ದ್ವಿಚಕ್ರ ವಾಹನವನ್ನು ನೀಡಲು ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರು ಮೇಲೆ ಓದಲಾದ ದಿನಾಂಕ: 11.4.2014 ರ ಪತ್ರದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಮೇಲಿನ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 111 ಪಿಎಚ್‌ಪಿ 2014, ಬೆಂಗಳೂರು, ದಿನಾಂಕ: 4.7.2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ದೈಹಿಕ ವಿಕಲಚೇತನರಿಗೆ ಉದ್ಯೋಗ ಕೈಗೊಳ್ಳಲು ಅಥವಾ ಅವರು ಉದ್ಯೋಗ ನಿರ್ವಹಿಸುವ ಸ್ಥಳಕ್ಕೆ/ ಉನ್ನತ ಶಿಕ್ಷಣ ವ್ಯಾಸಂಗ ಮಾಡುತ್ತಿರುವ ಕಾಲೇಜುಗಳಿಗೆ ಹೋಗಿ ಬರಲು ಜೀವಿತ ಕಾಲದಲ್ಲಿ ಒಬ್ಬ ಫಲಾನುಭವಿಗೆ ಒಂದು ಬಾರಿಯಂತೆ ಯಂತ್ರಚಾಲಿತ ದ್ವಿಚಕ್ರ ವಾಹನವನ್ನು ನೀಡಲು ಆಡಳಿತಾತ್ಮಕ ಅನುಮೋದನೆ ನೀಡಿದೆ.

ಈ ಯೋಜನೆಗೆ ತಗಲುವ ರೂ.6,12,50,000/- (ರೂಪಾಯಿ ಆರು ಕೋಟಿ ಹನ್ನೆರಡು ಲಕ್ಷ ಐವತ್ತು ಸಾವಿರಗಳು ಮಾತ್ರ) ಗಳ ವೆಚ್ಚವನ್ನು ಲೆಕ್ಕಶೀರ್ಷಿಕೆ 2235-02-101-0-52 ಯೋಜನೆ ಉಪ ಲೆಕ್ಕಶೀರ್ಷಿಕೆ 051 ಸಾಧನ ಸಲಕರಣೆ ಯೋಜನೆಯಡಿ ಒದಗಿಸಿರುವ ಅನುದಾನದಲ್ಲಿ ಭರಿಸತಕ್ಕದ್ದು. ಚಾಲ್ತಿಯಲ್ಲಿರುವ ನಿಯಮಗಳ ಪ್ರಕಾರ ಯಂತ್ರಚಾಲಿತ ದ್ವಿಚಕ್ರ ವಾಹನಗಳನ್ನು ಖರೀದಿಸುವುದು

ಈ ಕಾರ್ಯಕ್ರಮದ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಯೋಜನಾ ಸಹಾಯಕರನ್ನು ನೇಮಕ ಮಾಡಿಕೊಳ್ಳುವುದು ಸೇರಿದಂತೆ ಕಛೇರಿ ಪೀಠೋಪಕರಣ/ ಸಾಮಗ್ರಿಗಳ ಖರೀದಿಗೆ ಸಹಮತಿಸಿರುವುದಿಲ್ಲ.

ಈ ಆದೇಶದ ಅನುಬಂಧದಲ್ಲಿ ಲಗತ್ತಿಸಿರುವ ಮಾರ್ಗಸೂಚಿಗಳ ಪ್ರಕಾರ ಯೋಜನೆಯನ್ನು ಅನುಷ್ಠಾನಗೊಳಿಸುವುದು.

ಈ ಆದೇಶವನ್ನು ಕ್ರಮವಾಗಿ ಆರ್ಥಿಕ ಇಲಾಖೆ, ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 448 ವೆಚ್ಚ-3/2014, ದಿನಾಂಕ 13.6.2014 ಹಾಗೂ ಪಿಡಿ 21 ಪಿಎಂಐ 2014, ದಿನಾಂಕ 11.6.2014 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

(ವಿ.ಕೆ. [illegible])
ಸರ್ಕಾರದ ಅಧೀನ ಕಾರ್ಯದರ್ಶಿ-2
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ,
ಹಾಗೂ ವಿಕಲಚೇತನರ ಮತ್ತು ಹಿರಿಯ
ನಾಗರಿಕರ ಸಬಲೀಕರಣ ಇಲಾಖೆ.

ಇವರಿಗೆ:-

1. ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು.
2. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು.
3. ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಬೆಂಗಳೂರು.
4. [illegible] ಮಹಿಳಾ ಮತ್ತು ಮಕ್ಕಳ [illegible] ಚೇತನರ ಹಾಗೂ [illegible] ಕರ ಸಬಲೀಕರಣ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನಸೌಧ.
5. ನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ಬೆಂಗಳೂರು.
6. ಆಂತರಿಕ ಆರ್ಥಿಕ ಸಲಹೆಗಾರರು,ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು.
7. ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವೆಚ್ಚ - 3 & 9).
8. ನಿರ್ದೇಶಕರು, ಯೋಜನಾ ಇಲಾಖೆ (ಪಿ.ಎಂ.ಐ. ವಿಭಾಗ).
9. ಎಲ್ಲಾ ಜಿಲ್ಲೆಯ ಉಪ ನಿರ್ದೇಶಕರು/ ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ (ನಿರ್ದೇಶಕರ ಮುಖಾಂತರ).
10. ಎಲ್ಲಾ ಜಿಲ್ಲೆಯ ಅಂಗವಿಕಲರ ಕಲ್ಯಾಣಾಧಿಕಾರಿಗಳು, ಉಪ ನಿರ್ದೇಶಕರ ಕಛೇರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ (ನಿರ್ದೇಶಕರ ಮುಖಾಂತರ).
11. ಶಾಖಾ ರಕ್ಷಾ ಕಡತ/ ಹೆಚ್ಚುವರಿ ಪ್ರತಿ.

ಸರ್ಕಾರದ ಆದೇಶ ಸಂಖ್ಯೆ: ಮಮಇ 111 ಪಿಎಚ್‌ಪಿ 2014. ದಿನಾಂಕ: 4.7.2014 ರ

## ಆದೇಶಕ್ಕೆ ಮಾರ್ಗಸೂಚಿಗಳು

1. ವಿಕಲಚೇತನ ವ್ಯಕ್ತಿಗಳು ಭಾರತದ ಪ್ರಜೆಯಾಗಿದ್ದು ಕರ್ನಾಟಕದಲ್ಲಿ ಕನಿಷ್ಠ 10 ವರ್ಷಗಳು ವಾಸವಾಗಿರಬೇಕು. 20 ರಿಂದ 60 ರ ವಯೋಮಾನ ತೀರ್ವತರನಾದ ದೈಹಿಕ ವಿಕಲಚೇತನರಿಗೆ ಮಾತ್ರ ಜೀವಿತ ಕಾಲದಲ್ಲಿ 1 ಬಾರಿ ಮಾತ್ರ ಸೌಲಭ್ಯ ಕಲ್ಪಿಸಲಾಗಿದೆ.
2. ಈ ಯೋಜನೆ ಸೌಲಭ್ಯ ಪಡೆಯಲು ಕುಟುಂಬ ವಾರ್ಷಿಕ ಆದಾಯ ರೂ.2.00 ಲಕ್ಷಗಳಿಂತ ಕಡಿಮೆ ಇರಬೇಕು.
3. ಅಂಗವಿಕಲರ ಅಧಿನಿಯಮದಲ್ಲಿ ಸೂಚಿಸಿರುವ ಹಾಗೂ ವೈದ್ಯಕೀಯ ಪ್ರಾಧಿಕಾರದಿಂದ ನೀಡಿರುವ ಗುರುತಿನ ಚೀಟಿಯೊಂದಿಗೆ ದೃಢೀಕೃತ ವೈದ್ಯಕೀಯ ಪ್ರಮಾಣ ಪತ್ರ ಸಲ್ಲಿಸಬೇಕು. ಇತರ ಇಲಾಖೆಗಳು ಅಥವಾ ಸಂಘ ಸಂಸ್ಥೆಗಳಿಂದ ಯಂತ್ರಚಾಲಿತ ದ್ವಿಚಕ್ರವಾಹನ ಪಡೆದಿದ್ದಲ್ಲಿ ಅಂತಹವರು ಅರ್ಹರಾಗಿರುವುದಿಲ್ಲ.
4. ಈ ಸೌಲಭ್ಯ ಪಡೆಯುವ ದೈಹಿಕ ವಿಕಲಚೇತನರು ಶೇ.75% ಕ್ಕಿಂತ ಹೆಚ್ಚಿನ ದೈಹಿಕ ವಿಕಲಚೇತನ ರಾಗಿರಬೇಕು. ಹಾಗೂ ಸೊಂಟದ ಕೆಳಗೆ ಅಂದರೆ ಎರಡು ಕಾಲುಗಳಲ್ಲಿ ಸ್ವಾದೀನ ಕಳೆದುಕೊಂಡಿರುವ ಎರಡು ಕೈಗಳು ಸ್ವಾಧೀನದಲ್ಲಿರುವ ಹಾಗೂ ಇತರೆ ಎಲ್ಲಾ ರೀತಿಯಲ್ಲಿ ಸದೃಢವಾಗಿರುವ ವಿಕಲಚೇತನರಾಗಿರಬೇಕು.ಇಂತಹ ನ್ಯೂನತೆಯನ್ನು ಹೊಂದಿರುವ ವಿವಿಧೋದ್ದೇಶ ಪುನರ್ವಸತಿ ಕಾರ್ಯಕರ್ತರಿಗೆ ಮೊದಲ ಆದ್ಯತೆ ಮೇಲೆ ಈ ಸೌಲಭ್ಯ ನೀಡಬಹುದು.
5. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್‌ರವರ ಅಧ್ಯಕ್ಷತೆಯಲ್ಲಿ ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಜಿಲ್ಲಾ ವೈದ್ಯಾಧಿಕಾರಿಗಳು, ಆರೋಗ್ಯ ಇಲಾಖೆ, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು ಹಾಗೂ ದೈಹಿಕ ವಿಕಲಚೇತನರ ಕ್ಷೇತ್ರದಲ್ಲಿ ಕಾರ್ಯನಿರ್ವಹಿಸುತ್ತಿರುವ ಒಂದು ಸ್ವಯಂ ಸೇವಾ ಸಂಸ್ಥೆಯ ಮುಖ್ಯಸ್ಥರ ಸಮಿತಿಯ ಮೂಲಕ ಫಲಾನುಭವಿಗಳನ್ನು ಆಯ್ಕೆ ಮಾಡುವುದು.
6. ಯಂತ್ರಚಾಲಿತ ದ್ವಿಚಕ್ರವಾಹನವನ್ನು ಅವರ ಜೀವಿತಾವಧಿಯಲ್ಲಿ ಯಾವುದೇ ಕಾರಣಕ್ಕೆ ಪರಭಾರೆ ಮಾಡಬಾರದು, ಮಾಡಿದ್ದು ಕಂಡುಬಂದಲ್ಲಿ ಅಂತಹವರ ಮೇಲೆ ಕಾನೂನು ಕ್ರಮ ಜರುಗಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
7. ಈ ಸೌಲಭ್ಯ ಪಡೆಯಲಿಚ್ಛಿಸುವ ವಿಕಲಚೇತನರು ದ್ವಿಚಕ್ರ ವಾಹನ ಚಾಲನೆ ಮಾಡುವ ಪರವಾನಗಿ ಪತ್ರ ಪಡೆದಿರಬೇಕು.
8. ವಿಕಲಚೇತನರಿಗೆ ನೀಡುವ ದ್ವಿಚಕ್ರ ವಾಹನವನ್ನು ಸಾರಿಗೆ ಇಲಾಖೆಯಿಂದ ನೊಂದಣಿ ಮಾಡಿಸಿ ನೀಡಬೇಕು. ಆರ್.ಸಿ. ಪುಸ್ತಕದ ಪ್ರತಿಯನ್ನು ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳಿಗೆ ನೀಡಬೇಕು. ಹಾಗೂ ಆರ್.ಸಿ ಪುಸ್ತಕದಲ್ಲಿ "ಫಲಾನುಭವಿ ಜೀವಿತವಾಗಿರುವವರೆಗೆ ಸರ್ಕಾರ ಮಂಜೂರು ಮಾಡಿರುವ ವಾಹನ ಮರು ಮಾರಾಟ ಮತ್ತು ವರ್ಗಾವಣೆ ಮಾಡುವಂತಿಲ್ಲ" ಎಂದು ನಮೂದಿಸಬೇಕು.

— * — * —

14-1-15

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ : ಅಂಗವಿಕಲತೆಯುಳ್ಳ ವ್ಯಕ್ತಿಗಳಿಗಾಗಿ ಸಾಂಸ್ಕೃತಿಕ ಚಟುವಟಿಕೆ ಮತ್ತು ಕ್ರೀಡೆಗಳ ಪ್ರೋತ್ಸಾಹದ ಯೋಜನೆಯ ಮಂಜೂರಾತಿ ಬಗ್ಗೆ.

ಓದಲಾಗಿದೆ : ನಿರ್ದೇಶಕರು, ಅಂಗವಿಕಲರ ಕಲ್ಯಾಣ ಇಲಾಖೆ, ಇವರ ಪತ್ರ ಸಂಖ್ಯೆ: ನಿಅಕ ಇ/7/ಯೋಜನೆ/96-97/858 ದಿನಾಂಕ: 11-6-1996.

### ಪ್ರಸ್ತಾವನೆ:

ಓದಲಾಗಿದೆ ಪತ್ರದಲ್ಲಿ ನಿರ್ದೇಶಕರು, ಅಂಗವಿಕಲರ ಕಲ್ಯಾಣ ಇಲಾಖೆ ಇವರು, ಅಂಗವಿಕಲರು ಇತರ ಸಾಮಾನ್ಯ ಜನರಂತೆ ಸಾಂಸ್ಕೃತಿಕ ಚಟುವಟಿಕೆ ಮತ್ತು ಕ್ರೀಡೆಗಳಲ್ಲಿ ಭಾಗವಹಿಸಿ ಸಮಾಜದ ಮುಖ್ಯವಾಹಿನಿಯಲ್ಲಿ ಸೇರುವಂತೆ ಅವಕಾಶ ಕಲ್ಪಿಸುವುದು ಅತ್ಯಗತ್ಯವಾಗಿದೆ, ಆದ್ದರಿಂದ ಇಂತಹ ಚಟುವಟಿಕೆಗಳಲ್ಲಿ ಭಾಗವಹಿಸುವ ಅಂಗವಿಕಲರಿಗೆ ಕಲ್ಪಿಸುವುದು ಅತ್ಯಗತ್ಯವಾಗಿದೆ, ಆದ್ದರಿಂದ ಇಂತಹ ಚಟುವಟಿಕೆಗಳಲ್ಲಿ ಭಾಗವಹಿಸುವ ಅಂಗವಿಕಲರಿಗೆ ಉತ್ತೇಜನ ನೀಡುವ ಸಲುವಾಗಿ ಎರಡು ಕರಡು ಯೋಜನೆಗಳನ್ನು ರೂಪಿಸಿ ಕಳುಹಿಸಲಾಗಿದೆ ಎಂದು ತಿಳಿಸಿದ್ದಾರೆ. ಅಂಗವಿಕಲ ಕಲಾವಿದರಿಗೆ ಪ್ರೋತ್ಸಾಹ ನೀಡುವ ಸಲುವಾಗಿ ಈ ಯೋಜನೆಗೆ 'ಪ್ರತಿಭೆ' ಎಂದು ಹೆಸರಿಸಲಾಗಿದ್ದು ಈ ಉದ್ದೇಶಕ್ಕಾಗಿ 1995-96ನೇ ಸಾಲಿನಲ್ಲಿ ಸರ್ಕಾರದ ಲೆಕ್ಕ ಶೀರ್ಷಿಕೆ 2235-02-101-0-33 (ಯೋಜನೆ)ಯಡಿಯಲ್ಲಿ ರೂ. 20.00 ಲಕ್ಷಗಳ ಆಯವ್ಯಯವನ್ನು ಒದಗಿಸಿದೆ ಹಾಗೂ 95-96ನೇ ಸಾಲಿನ ವಿಷಯ ಎಂದು ತಿಳಿಸಿದ್ದಾರೆ. ಆದುದರಿಂದ ಅಂಗವಿಕಲರ ಸಾಂಸ್ಕೃತಿಕ ಚಟುವಟಿಕೆಯ ಪ್ರೋತ್ಸಾಹಕ್ಕಾಗಿ ಸಿದ್ಧಪಡಿಸಿರುವ ಈ ಯೋಜನೆಗೆ ಸರ್ಕಾರದ ಮಂಜೂರಾತಿಯನ್ನು ನಿರ್ದೇಶಕರು ಕೋರಿದ್ದಾರೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಅ 282 ಪಿಹೆಚ್‌ಪಿ 96 (ಭಾಗ-1)**

**ಬೆಂಗಳೂರು, ದಿನಾಂಕ: 18ನೇ ಸೆಪ್ಟೆಂಬರ್ 1996**

ನಿರ್ದೇಶಕರು, ಅಂಗವಿಕಲರ ಕಲ್ಯಾಣ ಇಲಾಖೆ ಇವರ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕುಷವಾಗಿ ಪರಿಶೀಲಿಸಲಾಯಿತು. ಅಂಗವಿಕಲ ವ್ಯಕ್ತಿಗಳ ಸಾಂಸ್ಕೃತಿಕ ಚಟುವಟಿಕೆ ಪ್ರೋತ್ಸಾಹ ನೀಡುವ ಸಲುವಾಗಿ ಆರಂಭಿಸಲಾಗಿರುವ 'ಪ್ರತಿಭೆ' ಎಂಬ ಯೋಜನೆಗೆ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಯೋಜನೆಗೆ ಸಂಬಂಧಿಸಿದ ವಿವರಗಳನ್ನು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧ ರಲ್ಲಿ ಕೊಡಲಾಗಿದೆ.

ಈ ಯೋಜನೆಗೆ 1996-97ನೇ ಸಾಲಿನಲ್ಲಿ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2235-02-101-0-33 (ಯೋಜನೆ) ಯಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಯೋಜನಾ ಹಾಗೂ ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಪಿಡಿ 152 ಪಿಟಿಪಿ 96 ದಿನಾಂಕ: 26-8-96 ಹಾಗೂ ಎಫ್‌ಡಿ 910 ವೆಚ್ಚ-3/96 ದಿನಾಂಕ: 5-8-96 (ಅನುಕ್ರಮವಾಗಿ) ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

(ಜಿ.ಎಲ್. ಕೃಷ್ಣರಾವ್)

ಸರ್ಕಾರದ ಅಧೀನ ಕಾರ್ಯದರ್ಶಿ,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಅನುಬಂಧ

1995-96ನೇ ಸಾಲಿನ ವಿಷಯ ಸಮಿತಿ ತನ್ನ ವರದಿಯಲ್ಲಿ ಅಂಗವಿಕಲರಿಗೆ ಕ್ರೀಡೆ ಮತ್ತು ಸಾಂಸ್ಕೃತಿಕ ವಿಷಯಗಳಲ್ಲಿ ಪ್ರೋತ್ಸಾಹ ನೀಡುವುದು ಅವಶ್ಯವಿದೆಯೆಂದು ಹೇಳುತ್ತಾ ಈ ಉದ್ದೇಶಕ್ಕಾಗಿ ಇಲಾಖೆ ಕೆಲವು ಕಾರ್ಯಕ್ರಮಗಳನ್ನು ಪ್ರಾರಂಭಿಸಬೇಕು ಸಲಹೆ ಮಾಡಿದೆ. ವಿಷಯ ಸಮಿತಿಯ ಈ ಸಲಹೆಯನ್ನು ಗಮನದಲ್ಲಿರಿಸಿ 1996-97ನೇ ಆಯವ್ಯಯದಲ್ಲಿ ಇಲಾಖೆಯ ಯೋಜನಾ ಆಯವ್ಯಯದಲ್ಲಿ ಕ್ರೀಡೆ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳಿಗಾಗಿ ರೂ. 20.00 ಲಕ್ಷ ಒದಗಿಸಲಾಗಿದೆ. ವಿವಿಧ ಬಗೆಯ ಅಂಗವಿಕಲತೆ ಹೊಂದಿರುವ ವ್ಯಕ್ತಿಗಳಲ್ಲಿ ಅನೇಕರು ಉತ್ತಮ ಕಲಾವಿದರಾಗಿದ್ದಾರೆ. ನಾಟಕ, ಸಂಗೀತ, ಚಿತ್ರಕಲೆ, ನೃತ್ಯ ಮುಂತಾದವುಗಳಲ್ಲಿ ಅಂಗವಿಕಲ ಕಲಾವಿದರು ತಮ್ಮ ವಿಶೇಷ ಸಾಧನೆಯನ್ನು ಪ್ರದರ್ಶಿಸಿದ್ದಾರೆ. ಆದರೆ ಈ ವರ್ಗದ ಕಲಾವಿದರಿಗೆ ಸಾಕಷ್ಟು ಪ್ರೋತ್ಸಾಹ ಇಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆ. ಆದ್ದರಿಂದ ಅಂಗವಿಕಲ ಕಲಾವಿದರಿಗೆ ಸೂಕ್ತ ಪ್ರೋತ್ಸಾಹ ನೀಡುವ ಉದ್ದೇಶದಿಂದ ಕೆಳಗೆ ಪ್ರಸ್ತಾಪಿಸಿರುವ ಯೋಜನೆಗಳನ್ನು ರೂಪಿಸಲಾಗಿದೆ.

ಯೋಜನೆಯ ಹೆಸರು: ಈ ಯೋಜನೆಯನ್ನು 'ಪ್ರತಿಭೆ' ಎಂದು ಕರೆಯಲಾಗುವುದು.

ಯೋಜನೆಯ ಧ್ಯೇಯೋದ್ದೇಶಗಳು: ವಿವಿಧ ಬಗೆಯ ಅಂಗವಿಕಲತೆ ಹೊಂದಿದ್ದರೂ ಕೂಡ ಅನೇಕ ಅಂಗವಿಕಲ ವ್ಯಕ್ತಿಗಳು ಉತ್ತಮ ಮಟ್ಟದ ಕಲಾವಿದರಾಗಿದ್ದಾರೆ. ಈ ಕಲಾವಿದರಿಗೆ ತಮ್ಮ ಕಲೆಯ ಪ್ರದರ್ಶನಕ್ಕೆ ಸೂಕ್ತ ಅವಕಾಶ ಕಲ್ಪಿಸಿಕೊಡುವುದು ಹಾಗೂ ಆ ಮೂಲಕ ಅವರ ಕಲೆಗೆ ಪ್ರೋತ್ಸಾಹ ನೀಡುವುದು ಯೋಜನೆಯ ಮುಖ್ಯ ಉದ್ದೇಶ.

1. ಅಂಗವಿಕಲರಿಗಾಗಿ ಜಿಲ್ಲಾ ಮಟ್ಟದ ಸಾಂಸ್ಕೃತಿಕ ಉತ್ಸವ:

ರಾಜ್ಯದಲ್ಲಿರುವ ಇಪ್ಪತ್ತು ಜಿಲ್ಲೆಗಳಲ್ಲಿ ಪ್ರತಿವರ್ಷ ಅಂಗವಿಕಲ ಕಲಾವಿದರಿಗಾಗಿಯೇ ಜಿಲ್ಲಾ ಮಟ್ಟದ ಸಾಂಸ್ಕೃತಿಕ ಉತ್ಸವ ಏರ್ಪಡಿಸಲಾಗುವುದು. ಈ ಉತ್ಸವದಲ್ಲಿ ಶಾಸ್ತ್ರೀಯ ಸಂಗೀತ, ಸುಗಮ ಸಂಗೀತ, ನಾಟಕ, ನೃತ್ಯ, ಜಾನಪದ ಕಲೆಗಳು ಮುಂತಾದ ಎಲ್ಲಾ ಕಲಾಮಾಧ್ಯಮಗಳಿಗೆ ಅವಕಾಶ ಇರುತದೆ.

ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ರಚಿಸಿರುವ ವಿಶ್ವ ಅಂಗವಿಕಲ ದಿನಾಚರಣಾ ಸಮಿತಿ ಈ ಕಾರ್ಯಕ್ರಮವನ್ನು ಏರ್ಪಡಿಸುವುದು. ಪ್ರತಿ ಜಿಲ್ಲೆಯ ಕನ್ನಡ ಸಂಸ್ಕೃತಿ ಇಲಾಖೆಯ ಸಹಾಯಕ ನಿರ್ದೇಶಕರನ್ನು ಈ ಸಮಿತಿಯ ಸದಸ್ಯರನ್ನಾಗಿ ಈ ವರ್ಷದಿಂದ ನೇಮಕ ಮಾಡಲಾಗುವುದು.

ಈ ಉತ್ಸವ ಆಚರಣೆಗೆ ಪ್ರತಿ ಜಿಲ್ಲೆಗೆ ತಲಾ ರೂ. 20,000ಗಳ ಧನ ಸಹಾಯ ಇಲಾಖೆಯಿಂದ ಬಿಡುಗಡೆ ಮಾಡಲಾಗುವುದು.

ಇಲಾಖೆ ನೀಡುವ ನಿರ್ವಹಣೆಗೆ ತಗಲುವ ಇತರೆ ವೆಚ್ಚವನ್ನು ಸ್ಥಳೀಯವಾಗಿ ಜಿಲ್ಲಾ ಪಂಚಾಯಿತಿ, ಸ್ವಯಂ ಸೇವಾ ಸಂಸ್ಥೆಗಳು, ಸಾಂಸ್ಕೃತಿಕ ಸಂಸ್ಥೆಗಳು, ದಾನಿಗಳು ಮುಂತಾದವರಿಂದ ಸಂಗ್ರಹಿಸಬಹುದಾಗಿದೆ.

ಇಲಾಖೆ ನೀಡುವ ಅನುದಾನವನ್ನು ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರಿಗೆ ಬಿಡುಗಡೆ ಮಾಡಲಾಗುವುದು. ಅವರು ಕಾರ್ಯಕ್ರಮದ ವೆಚ್ಚದ ವಿವರ ಕುರಿತು ಲೆಕ್ಕಪತ್ರ ಇಡುವುದು ಹಾಗೂ ಇಲಾಖೆಗೆ ಸೂಕ್ತ ರೀತಿಯಲ್ಲಿ ಲೆಕ್ಕಪತ್ರ ಒದಗಿಸಲು ಹೊಣೆಗಾರರಾಗಿರುತಾರೆ.

ಈ ಕಾರ್ಯಕ್ರಮ ಸಂಘಟನೆಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸೂಕ್ತ ಸಹಾಯ ಹಾಗೂ ಸಹಯೋಗ ಪಡೆಯಬೇಕು.

ಸಾಮಾನ್ಯವಾಗಿ ಈ ಉತ್ಸವದಲ್ಲಿ ಆ ಜಿಲ್ಲೆಯ ಕಲಾವಿದರಿಗೆ ಹೆಚ್ಚಿನ ಅವಕಾಶ ನೀಡುವುದು ಅಪೇಕ್ಷಣೀಯ.

ಸ್ಥಳೀಯ ಅಗತ್ಯಕ್ಕೆ ತಕ್ಕಂತೆ ಕಾರ್ಯಕ್ರಮಗಳಲ್ಲಿ ವಿಭಾಗಗಳನ್ನು ಮಾಡಿಕೊಳ್ಳಬಹುದಾಗಿದೆ

2. ಸ್ವಯಂ ಸೇವಾ ಸಂಸ್ಥೆಗಳಿಗೆ ಧನ ಸಹಾಯ:

ಅಂಗವಿಕಲರ ಕ್ಷೇಮಾಭಿವೃದ್ಧಿ ಕಾರ್ಯಕ್ರಮಗಳಲ್ಲಿ ತೊಡಗಿರುವ ಸ್ವಯಂ ಸೇವಾ ಸಂಸ್ಥೆಗಳು, ನೊಂದಾಯಿತ ಸಾಂಸ್ಕೃತಿಕ ಸ್ವಯಂ ಸೇವಾ ಸಂಸ್ಥೆಗಳು ಅಂಗವಿಕಲ ಕಲಾವಿದರನ್ನು ಒಳಗೊಂಡು ಏರ್ಪಡಿಸುವ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಈ ಯೋಜನೆಯಡಿ ಧನಸಹಾಯ ನೀಡಲಾಗುವುದು. ಧನ ಸಹಾಯದ ಗರಿಷ್ಠ ಮೊತ್ತ ರೂ. 10,000-00 ಆಗಿದೆ.

ಈ ಯೋಜನೆಯಡಿ ಧನಸಹಾಯ ಪಡೆಯಲು ಇಚ್ಛಿಸುವ ಸ್ವಯಂ ಸೇವಾ ಸಂಸ್ಥೆಗಳು ಕಾರ್ಯಕ್ರಮ ನಡೆಯುವ ಕನಿಷ್ಟ 2 ತಿಂಗಳ ಮೊದಲು ಇಲಾಖೆಗೆ ಕಾರ್ಯಕ್ರಮದ ಎಲ್ಲಾ ವಿವರಗಳನ್ನು ಒದಗಿಸಿ ಕೋರಿಕೆ ಸಲ್ಲಿಸಬೇಕಾಗುತ್ತದೆ.

ಧನಸಹಾಯ ಕೋರುವ ಸಂಸ್ಥೆ ಅರ್ಜಿಯೊಂದಿಗೆ ಸಂಸ್ಥೆಯ ನೊಂದಾವಣೆಗೆ ಸಂಬಂಧಪಟ್ಟ ದಾಖಲೆ, ಕಾರ್ಯಕ್ರಮದ ವೆಚ್ಚ ವಿವರಗಳನ್ನು ಈ ಮೊದಲು ಏರ್ಪಡಿಸಿದ ಸಾಂಸ್ಕೃತಿಕ ಕಾರ್ಯಕ್ರಮದ ವಿವರ, ಭಾಗವಹಿಸುವ ಅಂಗವಿಕಲ ಕಲಾವಿದರ ಸಂಕ್ಷಿಪ್ತ ಮಾಹಿತಿ ಅವರಿಗೆ ನೀಡುವ ಸಂಭಾವನೆಯ ಮೊತ್ತ ಮುಂತಾದ ವಿವರಗಳನ್ನು ಅರ್ಜಿಯೊಂದಿಗೆ ಒದಗಿಸಬೇಕಾಗುತ್ತದೆ.

ಧನಸಹಾಯದ ಮಂಜೂರಾತಿ ಆದೇಶವನ್ನು ಕಾರ್ಯಕ್ರಮ ನಡೆಯುವ ಮೊದಲೇ ಹೊರಡಿಸಲಾಗುವುದು. ಆದರೆ ಕಾರ್ಯಕ್ರಮ ಯಶಸ್ವಿಯಾಗಿ ನಡೆದಿರುವ ಬಗ್ಗೆ ವರದಿ ಪಡೆದ ಮೇಲೆ ಧನಸಹಾಯ ಬಿಡುಗಡೆ ಮಾಡಲಾಗುವುದು.

ಈ ಯೋಜನೆಯನ್ನು ಅಂಗವಿಕಲ ಕಲಾವಿದರಿಗೆ ಪ್ರೋತ್ಸಾಹ ನೀಡುವ ಉದ್ದೇಶದಿಂದ ರೂಪಿಸಿರುವುದರಿಂದ ಕೇವಲ ಅಂಗವಿಕಲ ಕಲಾವಿದರಿಗಾಗಿ ಏರ್ಪಡಿಸಿರುವ ಕಾರ್ಯಕ್ರಮಗಳಿಗೆ ಈ ಧನಸಹಾಯ ನೀಡಲಾಗುತ್ತಿದೆ. ಸಂಸ್ಥೆ ಏರ್ಪಡಿಸುವ ಸನ್ಮಾನ, ವಾರ್ಷಿಕೋತ್ಸವ ಮುಂತಾದ ಕಾರ್ಯಕ್ರಮಗಳಿಗೆ ಸಾಮಾನ್ಯವಾಗಿ ಈ ಧನಸಹಾಯ ಬಿಡುಗಡೆ ಮಾಡಲಾಗುವುದು.

ಈ ಯೋಜನೆಯನ್ನು ಅಂಗವಿಕಲ ಕಲಾವಿದರಿಗೆ ಪ್ರೋತ್ಸಾಹ ನೀಡುವ ಉದ್ದೇಶದಿಂದ ರೂಪಿಸಿರುವುದರಿಂದ ಕೇವಲ ಅಂಗವಿಕಲ ಕಲಾವಿದರಿಗಾಗಿ ಏರ್ಪಡಿಸಿರುವ ಕಾರ್ಯಕ್ರಮಗಳಿಗೆ ಈ ಧನಸಹಾಯ ನೀಡಲಾಗುತ್ತಿದೆ. ಸಂಸ್ಥೆ ಏರ್ಪಡಿಸುವ ಸನ್ಮಾನ, ವಾರ್ಷಿಕೋತ್ಸವ ಮುಂತಾದ ಕಾರ್ಯಕ್ರಮಗಳಿಗೆ ಸಾಮಾನ್ಯವಾಗಿ ಈ ಧನಸಹಾಯ ನೀಡಲಾಗುವುದಿಲ್ಲ. ಸಹಾಯಧನದ ಹಣವನ್ನು ಅಂಗವಿಕಲ ಕಲಾವಿದರಿಗೆ ಕಾರ್ಯಕ್ರಮ ನೀಡಿದ್ದಕ್ಕಾಗಿ ಸಂಭಾವನೆ ನೀಡಲು ಉಪಯೋಗಿಸತಕ್ಕದ್ದು. ನಿರ್ವಹಣಾ ವೆಚ್ಚವನ್ನು ಸಂಬಂಧಪಟ್ಟ ಸಂಸ್ಥೆಯೇ ವಹಿಸಿಕೊಳ್ಳಬೇಕು.

ಸಹಾಯಧನ ಮೊತ್ತವನ್ನು ಇಲಾಖೆ ಅಂತಿಮವಾಗಿ ತೀರ್ಮಾನಿಸುವುದು.

### 3. ಅಂಗವಿಕಲ ಕಲಾವಿದರ ಪ್ರಾಯೋಜಿತ ಕಾರ್ಯಕ್ರಮಗಳು:

ಬೇರೆ ಬೇರೆ ಸಾಂಸ್ಕೃತಿಕ ಸಂಘ ಸಂಸ್ಥೆಗಳು ಏರ್ಪಡಿಸುವ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ಅಂಗವಿಕಲ ಕಲಾವಿದರಿಗಾಗಿ ಪ್ರಾಯೋಜಿಕ ಕಾರ್ಯಕ್ರಮಗಳನ್ನು ನೀಡುವುದು ಈ ಯೋಜನೆಯ ಉದ್ದೇಶ.

ಸಂಗೀತ, ವಾದ್ಯಸಂಗೀತ, ಸುಗಮ ಸಂಗೀತ, ನಾಟಕ, ನೃತ್ಯ ಮುಂತಾದ ಕಾರ್ಯಕ್ರಮಗಳನ್ನು ಈ ಯೋಜನೆಯಡಿಯಲ್ಲಿ ಪ್ರಾಯೋಜಿಸಲು ಅವಕಾಶವಿದೆ.

ಅಂಗವಿಕಲ ಕಲಾವಿದರು ನೀಡುವ ಪ್ರಾಯೋಜಿಕ ಕಾರ್ಯಕ್ರಮಗಳಿಗೆ ಕೆಳಗಿನಂತೆ ಧನಸಹಾಯ ನೀಡಲಾಗುವುದು.

1. ಸ್ಥಳೀಯ ಕಲಾವಿದರನ್ನು ಒಳಗೊಂಡ 4 ಹಾಗೂ ಅದಕ್ಕಿಂತ ಕಡಿಮೆ ಇರುವ ಕಾರ್ಯಕ್ರಮಗಳಿಗೆ ರೂ. 2,000-00.
2. 4 ಕ್ಕಿಂತ ಹೆಚ್ಚು ಕಲಾವಿದರಿರುವ ಸ್ಥಳೀಯ ಕಲಾವಿದರು ಇರುವ ಕಾರ್ಯಕ್ರಮ ಒಂದಕ್ಕೆ ರೂ. 3,000-00.
3. ಹೊರಗಿನ ಜಿಲ್ಲೆಯಿಂದ ಬರುವ 4 ಅಥವಾ ಅದಕ್ಕಿಂತ ಕಡಿಮೆಯಿರುವ ಕಲಾವಿದರಿಗೆ ರೂ. 2,500-00.
4. ಹೊರಗಿನ ಜಿಲ್ಲೆಯಿಂದ ಬರುವ 4 ಕ್ಕಿಂತ ಹೆಚ್ಚು ಕಲಾವಿದರಿರುವ ಕಾರ್ಯಕ್ರಮಕ್ಕೆ ರೂ. 3,000-00.

**ಅನುದಾನದ ಷರತ್ತುಗಳು**

1. ಬಿಡುಗಡೆಯಾದ ಅನುದಾನದ ಮೊತ್ತಕ್ಕೆ ಸಂಬಂಧಿಸಿದಂತೆ ಚಾರ್ಟರ್ಡ್ ಅಕೌಂಟೆಂಟ್‌ರ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.
2. ಬಿಡುಗಡೆಯಾದ ಅನುದಾನದ ಮೊತ್ತದಲ್ಲಿ ಉಳಿತಾಯವಾದಲ್ಲಿ ಸರ್ಕಾರಕ್ಕೆ ಹಿಂತಿರುಗಿಸತಕ್ಕದ್ದು.
3. ಇಲಾಖೆಯು ಕೋರಿದಾಗ ಅನುದಾನಕ್ಕೆ ಸಂಬಂಧಿಸಿದ ವೋಚರುಗಳು ರಿಜಿಸ್ಟರುಗಳು ಮುಂತಾದ ಲೆಕ್ಕಪತ್ರಗಳನ್ನು ತನಿಖೆಗಾಗಿ ಒದಗಿಸತಕ್ಕದ್ದು.

4. ಕರ್ನಾಟಕ ಆರ್ಥಿಕ ಸಂಹಿತೆಯ ಅನುಚ್ಛೇದ 161, 162ರಲ್ಲಿರುವ ಪ್ರಕಾರ ಲೆಕ್ಕಪತ್ರಗಳನ್ನು ನಿರ್ವಹಿಸತಕ್ಕದ್ದು.

5. ಅನುದಾನ ಬಿಡುಗಡೆಯ ಮೊದಲು 10 ರೂ.ಗಳ ಛಾಪಾ ಕಾಗದದಲ್ಲಿ ಕರ್ನಾಟಕ ರಾಜ್ಯದ ರಾಜ್ಯಪಾಲರಿಗೆ ಅನುದಾನ ಷರತ್ತುಗಳಿಗೆ ಬದ್ಧರಾಗಿರುವುದಾಗಿಯೂ ಅನುದಾನದ ಷರತ್ತನ್ನು ಉಲ್ಲಂಘಿಸಿದಲ್ಲಿ ಅಥವಾ ಅನುದಾನದ ಮೊತ್ತವನ್ನು ನಿಗದಿತ ಉದ್ದೇಶಕ್ಕೆ ಉಪಯೋಗಿಸದೇ ಇರುವುದು ಇಲಾಖೆಗೆ ಕಂಡುಬಂದಲ್ಲಿ ಪಡೆದಿರುವ ಅನುದಾನದ ಮೊತ್ತವನ್ನು ಸರ್ಕಾರಕ್ಕೆ ಹಿಂತಿರುಗಿಸುವುದಾಗಿ ಇಬ್ಬರು ಸಾಕ್ಷಿಗಳ ಸಹಿತ ಮುಚ್ಚಳಿಕೆಯನ್ನು ನೀಡತಕ್ಕದ್ದು.

**ಟಿಪ್ಪಣಿ:** ಒಂದು ಜಿಲ್ಲೆಯ ಕಲಾವಿದರನ್ನು ಆ ಜಿಲ್ಲೆಯಲ್ಲಿ ಸ್ಥಳೀಯ ಕಲಾವಿದರೆಂದು ಪರಿಗಣಿಸಲಾಗುವುದು.

ಪ್ರಾಯೋಜಿತ ಕಾರ್ಯಕ್ರಮ ನೀಡುವ ಕಲಾವಿದರು ಅಲ್ಲದೇ ಪ್ರಾಯೋಜಿತ ಕಾರ್ಯಕ್ರಮಗಳನ್ನು ಪಡೆಯಲು ಉದ್ದೇಶಿಸಿರುವ ನೋಂದಾಯಿತ ಸಂಸ್ಥೆ ಕಲಾವಿದರು ಹಾಗೂ ಕಾರ್ಯಕ್ರಮದ ಕುರಿತು ಎಲ್ಲ ವಿವರಗಳನ್ನು ನೇವು ಸಂಬಂಧಪಟ್ಟ ಜಿಲ್ಲೆಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಸಹಾಯಕ ನಿರ್ದೇಶಕರುಗಳಿಗೆ ಕನಿಷ್ಟ 1 ತಿಂಗಳ ಮೊದಲು ಅರ್ಜಿ ಸಲ್ಲಿಸತಕ್ಕದ್ದು.

ಕಾರ್ಯಕ್ರಮ ನಡೆದಿರುವ ಬಗ್ಗೆ ಸೂಕ್ತ ವಿವರಗಳನ್ನು ಹಾಗೂ ಅಗತ್ಯವಿರುವ ದಾಖಲೆಗಳನ್ನು ಪಡೆದು ಸಹಾಯಕ ನಿರ್ದೇಶಕರು ಪ್ರಾಯೋಜಿತ ಕಾರ್ಯಕ್ರಮಗಳಿಗೆ ಸಹಾಯಧನವನ್ನು ಕೂಡಲೇ ಬಿಡುಗಡೆ ಮಾಡಬೇಕು.

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ : ಅಂಗವಿಕಲತೆಯು ವ್ಯಕ್ತಿಗಳಿಗಾಗಿ ಸಾಂಸ್ಕೃತಿಕ ಚಟುವಟಿಕೆ ಮತ್ತು ಕ್ರೀಡೆಗಳ ಪ್ರೋತ್ಸಾಹದ ಯೋಜನೆಯ ಮಂಜೂರಾತಿ ಬಗ್ಗೆ.

ಓದಲಾಗಿದೆ: ನಿರ್ದೇಶಕರು, ಅಂಗವಿಕಲರ ಕಲ್ಯಾಣ ಇಲಾಖೆ ಇವರ ಪತ್ರ ಸಂಖ್ಯೆ: ನಿಅಕಇ:7:ಯೋಜನೆ:96-97:858
ದಿನಾಂಕ: 11-6-1996.

### ಪ್ರಸ್ತಾವನೆ:

ಓದಲಾಗಿದೆ ಪತ್ರದಲ್ಲಿ ನಿರ್ದೇಶಕರು, ಅಂಗವಿಕಲರ ಕಲ್ಯಾಣ ಇಲಾಖೆ ಇವರು, ಅಂಗವಿಕಲರು ಇತರೆ ಸಾಮಾನ್ಯ ಜನರಂತೆ ಕ್ರೀಡೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಲು ಸಮಾಜದ ಮುಖ್ಯ ವಾಹಿನಿಯಲ್ಲಿ ಸೇರುವಂತೆ ಅವಕಾಶ ಕಲ್ಪಿಸುವುದು ಅತ್ಯಗತ್ಯವಾಗಿದೆ. ಆದುದರಿಂದ ಇಂತಹ ಚಟುವಟಿಕೆಗಳಲ್ಲಿ ಭಾಗವಹಿಸುವ ಅಂಗವಿಕಲ ಕ್ರೀಡಾಪಟುಗಳಿಗೆ ಪ್ರೋತ್ಸಾಹ ನೀಡುವ ಸಲುವಾಗಿ "ಸಾಧನೆ" ಎಂಬ ಯೋಜನೆಯನ್ನು ಪ್ರಾರಂಭಿಸಲಾಗಿದೆ ಎಂದು ತಿಳಿಸಿ ಈ ಉದ್ದೇಶಕ್ಕಾಗಿ 1996-97ನೇ ಸಾಲಿನಲ್ಲಿ ಸರ್ಕಾರವು ಲೆಕ್ಕ ಶೀರ್ಷಿಕೆ "2235-02-101-0-33 (ಯೋಜನೆ)" ಯಡಿಯಲ್ಲಿ ರೂ. 20.00 ಲಕ್ಷಗಳ ಆಯವ್ಯಯವನ್ನು ಒದಗಿಸಿದೆ. ಹಾಗೂ 1995-96ನೇ ಸಾಲಿನ ವಿಷಯ ಸಮಿತಿಯು ಸಹ ಈ ಕಾರ್ಯಕ್ರಮವನ್ನು ಅಂಗವಿಕಲ ಕ್ರೀಡಾಪಟುಗಳಿಗೆ ಪ್ರೋತ್ಸಾಹ ನೀಡುವ ಈ ಯೋಜನೆಗೆ ನಿರ್ದೇಶಕರು ಸರ್ಕಾರದ ಮಂಜೂರಾತಿ ಕೋರಿದ್ದಾರೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಅ 282 ಪಿಹೆಚ್‌ಪಿ 96 (ಭಾಗ-2) ಬೆಂಗಳೂರು,**
**ದಿನಾಂಕ: 18ನೇ ಸೆಪ್ಟೆಂಬರ್ 96**

ನಿರ್ದೇಶಕರು, ಅಂಗವಿಕಲರ ಕಲ್ಯಾಣ ಇಲಾಖೆ ಇವರ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕುಷವಾಗಿ ಪರಿಶೀಲಿಸಲಾಯಿತು. ಅಂಗವಿಕಲ ಕ್ರೀಡಾಪಟುಗಳ ಪ್ರೋತ್ಸಾಹಕ್ಕಾಗಿ ಆರಂಭಿಸುವ "ಸಾಧನೆ" ಎಂಬ ಯೋಜನೆಯ ಅನುಷ್ಠಾನಕ್ಕಾಗಿ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಯೋಜನೆಗೆ ಸಂಬಂಧಿಸಿದ ವಿವರಗಳನ್ನು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧ.....ರಲ್ಲಿ ಕೊಡಲಾಗಿದೆ.

ಈ ಯೋಜನೆಗೆ 1996-97ನೇ ಸಾಲಿನಲ್ಲಿ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2235-02-101-0-33 (ಯೋಜನೆ)"ಯಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಯೋಜನಾ ಹಾಗೂ ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಪಿಡಿ 152 ಪಿಟಿಪಿ 96 ದಿನಾಂಕ: 26-8-96 ಹಾಗೂ ಎಫ್‌ಡಿ 910 ವೆಚ್ಚ-3:96 ದಿನಾಂಕ: 5-8-1996 (ಅನುಕ್ರಮವಾಗಿ)ರಲ್ಲಿ ನೀಡಿರುವ ಸಹಮತಿಗೆ ಅನುಸಾರವಾಗಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
(ಜಿ. ಲತಾ ಕೃಷ್ಣರಾವ್)
ಸರ್ಕಾರದ ಅವರ ಕಾರ್ಯದರ್ಶಿ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಅನುಬಂಧ

1995-96ನೇ ಸಾಲಿನ ವಿಷಯಸಮಿತಿ ತನ್ನ ವರದಿಯಲ್ಲಿ ಅಂಗವಿಕಲರಿಗೆ ಕ್ರೀಡೆ ಮತ್ತು ಸಾಂಸ್ಕೃತಿಕ ವಿಷಯಗಳಲ್ಲಿ ಪ್ರೋತ್ಸಾಹ ನೀಡುವುದು ಅವಶ್ಯವಿದೆಯೆಂದು ಹೇಳುತ್ತಾ ಈ ಉದ್ದೇಶಕ್ಕಾಗಿ ಇಲಾಖೆ ಕೆಲವು ಕಾರ್ಯಕ್ರಮಗಳನ್ನು ಪ್ರಾರಂಭಿಸಬೇಕೆಂದು ಸಲಹೆ ಮಾಡಿದೆ. ವಿಷಯಸಮಿತಿಯ ಈ ಸಲಹೆಯನ್ನು ಗಮನದಲ್ಲಿರಿಸಿ 1996-97ನೇ ಆಯವ್ಯಯದಲ್ಲಿ ಇಲಾಖೆಯ ಯೋಜನಾ ಆಯವ್ಯಯದಲ್ಲಿ ಕ್ರೀಡೆ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳಿಗಾಗಿ ರೂ. 20.00 ಲಕ್ಷ ಒದಗಿಸಲಾಗಿದೆ.

ಅನೇಕ ಜನ ಅಂಗವಿಕಲ ಕ್ರೀಡಾಪಟುಗಳು ವಿವಿಧ ಬಗೆಯ ಕ್ರೀಡೆಗಳಲ್ಲಿ ಗಣನೀಯ ಸಾಧನೆ ಮಾಡಿದ್ದಾರೆ. ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮಟ್ಟದ ಕ್ರೀಡಾಸ್ಪರ್ಧೆಗಳಲ್ಲಿ ಭಾಗವಹಿಸಿದ್ದಾರೆ. ಆದ್ದರಿಂದ ಅಂಗವಿಕಲ ಕ್ರೀಡಾಪಟುಗಳಿಗೆ ಸ್ಪರ್ಧೆಗಳಲ್ಲಿ ಭಾಗವಹಿಸಲು ಅವಕಾಶ ನೀಡುವ ದೃಷ್ಟಿಯಿಂದ ಕೆಳಗೆ ಪ್ರಸ್ತಾಪಿಸಿರುವ ಯೋಜನೆಗಳನ್ನು ಪ್ರಸ್ತುತ ಆರ್ಥಿಕ ವರ್ಷದಿಂದ ಅನುಷ್ಠಾನಗೊಳಿಸಲು ಉದ್ದೇಶಿಸಲಾಗಿದೆ.

**ಯೋಜನೆಯ ಹೆಸರು:** ಈ ಯೋಜನೆಯನ್ನು 'ಸಾಧನೆ' ಎಂದು ಕರೆಯಲಾಗಿದೆ.

**ಯೋಜನೆಯ ಧ್ಯೇಯೋದ್ದೇಶಗಳು:** ವಿವಿಧ ಬಗೆಯ ಅಂಗವಿಕಲತೆ ಇರುವ ಕ್ರೀಡಾಪಟುಗಳಿಗೆ ಅವರ ಕ್ರೀಡಾ ಚಾತುರ್ಯವನ್ನು ಪ್ರದರ್ಶಿಸಲು ಅವಕಾಶ ನೀಡುವುದು ಹಾಗೂ ಅವರಿಗೆ ಹೆಚ್ಚಿನ ಪ್ರಗತಿ ಸಾಧಿಸಲು ಪ್ರೋತ್ಸಾಹ ನೀಡುವುದು ಈ ಯೋಜನೆಗಳ ಮುಖ್ಯ ಉದ್ದೇಶವಾಗಿದೆ.

**ಜಿಲ್ಲಾಮಟ್ಟದ ಕ್ರೀಡಾಸ್ಪರ್ಧೆಗಳು:** ಪ್ರತಿ ವರ್ಷ ನವೆಂಬರ್ ತಿಂಗಳಿನಲ್ಲಿ ರಾಜ್ಯದ ಇಪ್ಪತ್ತು ಜಿಲ್ಲೆಗಳಲ್ಲಿ ವಿವಿಧ ಬಗೆಯ ಅಂಗವಿಕಲತೆ ಇರುವ ಕ್ರೀಡಾಪಟುಗಳಿಗಾಗಿ ಜಿಲ್ಲಾಮಟ್ಟದ ಕ್ರೀಡಾ ಸ್ಪರ್ಧೆಗಳನ್ನು ಏರ್ಪಡಿಸಲಾಗುವುದು. ಈ ಸ್ಪರ್ಧೆಗಳಲ್ಲಿ ಎರಡು ವಿಭಾಗಗಳಿದ್ದು ಒಂದನೇ ವಿಭಾಗದಲ್ಲಿ ಎಲ್ಲ ವಯಸ್ಸಿನ ಶಾಲಾ ಮಕ್ಕಳಿಗಾಗಿ ಕ್ರೀಡಾಸ್ಪರ್ಧೆಗಳನ್ನು ಏರ್ಪಡಿಸಲಾಗುವುದು. ಎರಡನೇ ವಿಭಾಗದಲ್ಲಿ ವಿದ್ಯಾರ್ಥಿಗಳಲ್ಲದ 25 ವರ್ಷಕ್ಕಿಂತ ಕಡಿಮೆ ವಯಸ್ಸಿನ ಮುಕ್ತ ಯುವ ಕ್ರೀಡಾ ಪಟುಗಳಿಗೆ ಸ್ಪರ್ಧೆಗಳನ್ನು ಏರ್ಪಡಿಸಲಾಗುವುದು.

ಈ ಸ್ಪರ್ಧೆಗಳನ್ನು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿರುವ ವಿಶ್ವ ಅಂಗವಿಕಲರ ದಿನಾಚರಣೆ ಸಮಿತಿ ಮೂಲಕ ಏರ್ಪಡಿಸಲಾಗುವುದು. ಈ ಸಮಿತಿಗೆ ಪ್ರಸ್ತುತ ವರ್ಷದಿಂದ ಯುವಜನ ಸೇವೆ ಹಾಗೂ ಕ್ರೀಡಾ ಇಲಾಖೆಯ ಜಿಲ್ಲಾಮಟ್ಟದ ಅಧಿಕಾರಿಯನ್ನು ಕೂಡ ಸದಸ್ಯರನ್ನಾಗಿ ನೇಮಕ ಮಾಡಲಾಗುವುದು. ಜಿಲ್ಲಾ ಮಟ್ಟದ ಕ್ರೀಡಾ ಸ್ಪರ್ಧೆ ಏರ್ಪಡಿಸಲು ಪ್ರತಿ ಜಿಲ್ಲೆಗೆ ರೂ. 25,000-00 ಧನ ಸಹಾಯವನ್ನು ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಮೂಲಕ ಬಿಡುಗಡೆ ಮಾಡಲಾಗುವುದು.

ಈ ಅನುದಾನವನ್ನು ಮುಖ್ಯವಾಗಿ ಸ್ಪರ್ಧೆಯಲ್ಲಿ ವಿಜೇತರಾಗುವ ಕ್ರೀಡಾಪಟುಗಳಿಗೆ ಬಹುಮಾನ ನೀಡಲು ಉಪಯೋಗಿಸಬಹುದಾಗಿದೆ.

ಜಿಲ್ಲಾ ಮಟ್ಟದ ಸ್ಪರ್ಧೆಯನ್ನು ಏರ್ಪಡಿಸಲು ತಗಲುವ ಇತರ ವೆಚ್ಚಗಳನ್ನು ಜಿಲ್ಲಾ ಪಂಚಾಯಿತಿ, ಸ್ವಯಂ ಸೇವಾ ಸಂಸ್ಥೆಗಳು ಮತ್ತು ದಾನಿಗಳಿಂದ ಸಂಗ್ರಹಿಸಬಹುದಾಗಿದೆ.

ಸರ್ಕಾರ ಬಿಡುಗಡೆ ಮಾಡುವ ಹಣದ ಬಗ್ಗೆ ಹಾಗೂ ಸಾರ್ವಜನಿಕರಿಂದ ಸಂಗ್ರಹಿಸಿರುವ ವಂತಿಗೆ ಬಗ್ಗೆ ಸರಿಯಾದ ಲೆಕ್ಕಪತ್ರಗಳನ್ನು ಸಿದ್ಧಪಡಿಸಿ ಈ ಇಲಾಖೆಗೆ ಸಂಪೂರ್ಣ ಲೆಕ್ಕಪತ್ರಗಳನ್ನು ಒದಗಿಸುವುದು. ಜಿಲ್ಲಾ ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಹೊಣೆ ಆಗಿರುತ್ತದೆ.

### ಕ್ರೀಡಾಪಟುಗಳಿಗೆ ಪ್ರವಾಸ ಸಿದ್ಧತೆಗಾಗಿ ಧನ ಸಹಾಯ

ರಾಷ್ಟ್ರೀಯ ಇಲ್ಲವೇ ಅಂತರರಾಷ್ಟ್ರೀಯ ಮಟ್ಟದ ಕ್ರೀಡಾಸ್ಪರ್ಧೆಯಲ್ಲಿ ಭಾಗವಹಿಸುವ ಶ್ರೇಷ್ಠ ಮಟ್ಟದ ಕ್ರೀಡಾಪಟುಗಳಿಗೆ ಗರಿಷ್ಠ ರೂ. 15,000-00 ವರೆಗೆ ಧನಸಹಾಯ ನೀಡಲು ಈ ಯೋಜನೆಯಡಿಯಲ್ಲಿ ಅವಕಾಶವಿದೆ.

ಪ್ರವಾಸ ವೆಚ್ಚಕ್ಕಾಗಿ ಧನ ಸಹಾಯ ಕೇಳುವ ಕ್ರೀಡಾಪಟುಗಳು ತಾವು ಭಾಗವಹಿಸಲಿರುವ ಕ್ರೀಡಾಸ್ಪರ್ಧೆಯ ಎಲ್ಲ ವಿವರಗಳು, ಪ್ರವಾಸ ವೆಚ್ಚದ ವಿವರಗಳು ಹಾಗೂ ಸ್ಪರ್ಧೆಯಲ್ಲಿ ಭಾಗವಹಿಸಲು ತಮಗೆ ಬಂದಿರುವ ಆಮಂತ್ರಣದ ಅಧಿಕೃತ ದಾಖಲೆಯೊಂದಿಗೆ ಸಹಾಯಧನ ಕೋರಿ ಅರ್ಜಿ ಸಲ್ಲಿಸಬೇಕಾಗುತ್ತದೆ.

ರಾಷ್ಟ್ರ ಮಟ್ಟದ ಕ್ರೀಡಾ ಸ್ಪರ್ಧೆಗಳಿಗೆ ಪ್ರವಾಸ ಸಹಾಯಧನವನ್ನು ಎರಡನೇ ದರ್ಜೆಯ ರೈಲು ಪ್ರವಾಸದ ವಾಸ್ತವಿಕ ವೆಚ್ಚ ಮಾತ್ರ ನೀಡಲಾಗುವುದು. ವಿದೇಶ ಪ್ರವಾಸ ಮಾಡುವ ಸಂದರ್ಭದಲ್ಲಿ ಸಹಾಯಧನದ ಗರಿಷ್ಠ ಮಿತಿ ರೂ. 15,000-00 ಮಾತ್ರ ಆಗಿರುತ್ತದೆ.

ಸಂಬಂಧಪಟ್ಟ ಕ್ರೀಡಾಪಟು ಈ ಉದ್ದೇಶಕ್ಕಾಗಿ ಬೇರೆ ಯಾವುದೇ ವ್ಯಕ್ತಿ ಸಂಸ್ಥೆ ಇಲಾಖೆ ಈ ಮೂಲಗಳಿಂದ ಧನಸಹಾಯ ಪಡೆದಿರುವ ಬಗ್ಗೆ ಮಾಹಿತಿಗಳನ್ನು ಒದಗಿಸತಕ್ಕದ್ದು. ಧನಸಹಾಯದ ಮೊತ್ತವನ್ನು ಈ ಮಾಹಿತಿಗಳ ಆಧಾರದ ಮೇಲೆ ತೀರ್ಮಾನಿಸಲಾಗುತ್ತದೆ.

ಸಂಬಂಧಪಟ್ಟ ಕ್ರೀಡಾಪಟು ಸ್ಪರ್ಧೆಯಲ್ಲಿ ಭಾಗವಹಿಸಲು ಸೂಕ್ತ ಅರ್ಹತೆ ಹೊಂದಿದ್ದಾನೆಯೇ ಅಥವಾ ಇಲ್ಲವೇ ಎಂಬ ಅಂಶದ ಬಗ್ಗೆ ಯುವಜನ ಸೇವೆ ಹಾಗೂ ಕ್ರೀಡಾ ಇಲಾಖೆ ನೀಡಿರುವ ಅಭಿಪ್ರಾಯವೇ ಅಂತಿಮ ಅಭಿಪ್ರಾಯವಾಗಿರುತ್ತದೆ.

ರಾಷ್ಟ್ರೀಯ/ಅಂತರಾಷ್ಟ್ರೀಯ ಮಟ್ಟದ ಕ್ರೀಡೆಯಲ್ಲಿ ಭಾಗವಹಿಸಲು ಕ್ರೀಡಾ ಪಟುಗಳ ಸಿದ್ಧತೆಗಾಗಿ ಅಗತ್ಯವಿರುವ, ಪೋಷಾಕುಗಳು, ಬೂಟ್ಸ್, ಪ್ರವೇಶ ಶುಲ್ಕ, ಇತರೆ ಸಾಮಗ್ರಿಗಳನ್ನು ಖರೀದಿಸಲು ಧನಸಹಾಯ ಕೋರಬಹುದಾಗಿದೆ. ಆದರೆ ಕ್ರೀಡೆಯ ಸಾಧನಗಳಾದ ಬ್ಯಾಟ್, ಸ್ಟಿಕ್, ಬಾಲ್ ಮುಂತಾದ ಕ್ರೀಡೆ ವಸ್ತುಗಳನ್ನು ಖರೀದಿಸಲು ಧನಸಹಾಯ ನೀಡಲಾಗುವುದಿಲ್ಲ.

ಕ್ರೀಡಾ ಸಿದ್ಧತೆಗಾಗಿ ತಗಲುವ ವೆಚ್ಚದ ಪ್ರಮಾಣವನ್ನು ಸಂಬಂಧಪಟ್ಟ ಇಲಾಖೆಯೊಂದಿಗೆ ಸಮಾಲೋಚಿಸಿ ಗೊತ್ತುಪಡಿಸಲಾಗುವುದು.

ಈ ಯೋಜನೆಯಲ್ಲಿ ಧನಸಹಾಯ ಪಡೆಯುವ ಕ್ರೀಡಾಪಟುಗಳು ಸ್ಪರ್ಧೆಯಲ್ಲಿ ಭಾಗವಹಿಸದಿದ್ದರೆ ಇಲ್ಲವೇ ಯಾವುದೇ

ಕಾರಣಕ್ಕೆ ಸ್ಪರ್ಧೆಗಳು ನಿಂತುಹೋದಲ್ಲಿ ಇಲಾಖೆ ನೀಡಿರುವ ಧನಸಹಾಯ ಪೂರ್ಣಪ್ರಮಾಣದಲ್ಲಿ ಹಿಂತಿರುಗಿಸಬೇಕಾಗುತ್ತದೆ. ಈ ಕರಾರಿಗೆ ಬದ್ಧವಾಗಿರುವ ಬಗ್ಗೆ ಧನಸಹಾಯ ಪಡೆಯುವ ಮೊದಲು ಇಚ್ಛಿಸುವ ಕ್ರೀಡಾಪಟುಗಳು ಕನಿಷ್ಠ 45 ದಿನ ಮೊದಲು ಎಲ್ಲಾ ಮಾಹಿತಿ ಒದಗಿಸಿ ಅರ್ಜಿ ಸಲ್ಲಿಸಬೇಕಾಗುತ್ತದೆ. ಪೂರ್ಣ ಮಾಹಿತಿ ಒದಗಿಸದಿರುವ ಅರ್ಜಿಗಳನ್ನು ನಿರ್ದಾಕ್ಷಿಣ್ಯವಾಗಿ ತಿರಸ್ಕರಿಸಲಾಗುವುದು.

ಯಾವುದೇ ಸಂದರ್ಭದಲ್ಲಿ ಘಟನೋತ್ತರ ಮಂಜೂರಾತಿಗೆ ಅವಕಾಶ ಇರುವುದಿಲ್ಲ.

ಸಹಿ/-

(ಲತಾ ಕೃಷ್ಣರಾವ್)

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ : ಅಂತರ್ ರಾಷ್ಟ್ರೀಯ ಮಟ್ಟದ ಸ್ಪರ್ಧೆಯಲ್ಲಿ ಭಾಗವಹಿಸುವ ಕ್ರೀಡಾಪಟುಗಳಿಗೆ ನೀಡುತ್ತಿರುವ ಧನ ಸಹಾಯವನ್ನು ಹೆಚ್ಚಿಸುವ ಬಗ್ಗೆ.

ಓದಲಾಗಿದೆ: 1. ಸರ್ಕಾರದ ಆದೇಶ ಸಂಖ್ಯೆ: ಮಮಅ:282:ಪಿಹೆಚ್‌ಪಿ:96. (ಭಾ-2) ದಿನಾಂಕ: 18-09-96.

2. ಕರ್ನಾಟಕ ರಾಜ್ಯ ಅಂಗವಿಕಲರ ಕ್ರೀಡಾ ಸಂಸ್ಥೆ, ಬೆಂಗಳೂರು ಇವರ ಮನವಿ ದಿನಾಂಕ: 05-09-2002.

### ಪ್ರಸ್ತಾವನೆ

ರಾಷ್ಟ್ರೀಯ ಇಲ್ಲವೇ ಅಂತರ್ ರಾಷ್ಟ್ರೀಯ ಮಟ್ಟದ ಸ್ಪರ್ಧೆಯಲ್ಲಿ ಭಾಗವಹಿಸುವ ಶ್ರೇಷ್ಠಮಟ್ಟದ ಕ್ರೀಡಾಪಟುಗಳಿಗೆ ಗರಿಷ್ಠ ರೂ. 15,000-00 ಗಳವರೆಗೆ ಧನ ಸಹಾಯ ನೀಡಲು ಮೇಲೆ ಕ್ರಮಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಅವಕಾಶವನ್ನು ಕಲ್ಪಿಸಲಾಗಿದೆ. ಕರ್ನಾಟಕ ರಾಜ್ಯ ಅಂಗವಿಕಲರ ಕ್ರೀಡಾಸಂಸ್ಥೆ, ಬೆಂಗಳೂರು ಇವರು ಈಗ ಸರ್ಕಾರವು ನೀಡುತ್ತಿರುವ ಸಹಾಯಧನದಲ್ಲಿ ಅಂತರ್‌ರಾಷ್ಟ್ರೀಯ ಕ್ರೀಡಾ ಕೂಟದಲ್ಲಿ ಭಾಗವಹಿಸಲು ಸಾಧ್ಯವಾಗುವುದಿಲ್ಲವೆಂದು ತಿಳಿಸಿ ಸದರಿ ಸಹಾಯಧನವನ್ನು ಕನಿಷ್ಠ ರೂ. 50,000-00 (ರೂಪಾಯಿ ಐವತ್ತು ಸಾವಿರಗಳು ಮಾತ್ರ) ಕ್ಕೆ ಹೆಚ್ಚಿಸಬೇಕೆಂದು ಸರ್ಕಾರವನ್ನು ಕೋರಿರುತ್ತಾರೆ. ಸರ್ಕಾರವು ಈ ಪ್ರಸ್ತಾವನೆಯನ್ನು ಪರಿಶೀಲನೆ ಮಾಡಿದ್ದು, ಅಂಗವಿಕಲ ಕ್ರೀಡಾಪಟುಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಈಗ ನೀಡುವ ಧನಸಹಾಯವನ್ನು ಹೆಚ್ಚಿಸುವ ಅಗತ್ಯತೆಯನ್ನು ಮನಗಂಡು ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಅ:446:ಪಿಹೆಚ್‌ಪಿ:2002. ಬೆಂಗಳೂರು, ದಿನಾಂಕ: 21-3-2003**

ರಾಷ್ಟ್ರೀಯ ಇಲ್ಲವೇ ಅಂತರ್‌ರಾಷ್ಟ್ರೀಯ ಮಟ್ಟದ ಸ್ಪರ್ಧೆಯಲ್ಲಿ ಭಾಗವಹಿಸುವ ಶ್ರೇಷ್ಠಮಟ್ಟದ ಕ್ರೀಡಾಪಟುಗಳಿಗೆ ನೀಡಬೇಕಾದ ಸಹಾಯಧನವನ್ನು ಸರ್ಕಾರವು ರೂ. 15,000-00 ಗಳಿಂದ ರೂ. 30,000-00 (ಮೂವತ್ತು ಸಾವಿರ ರೂಪಾಯಿ) ಗಳಿಗೆ ಹೆಚ್ಚಳ ಮಾಡಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

(ಹುಲಿಯಪ್ಪ)

ಸರ್ಕಾರದ ಅಧೀನ ಕಾರ್ಯದರ್ಶಿ-1

ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಇಲಾಖೆ

15. ಅಂಗವಿಕಲರಿಗೂ ಹಾಗೂ ಗ್ರಾಮ ಪಂಚಾಯ್ತಿಯ ನಡುವೆ ಸೇತುವೆಯಂತೆ ಕಾರ್ಯ ನಿರ್ವಹಿಸಿ ತಮ್ಮ ವ್ಯಾಪ್ತಿಯಲ್ಲಿರುವ ಅಂಗವಿಕಲರ ಸಮಸ್ಯೆಗಳ ಬಗ್ಗೆ ಮೂಲಭೂತ ಮಾಹಿತಿಯನ್ನು ಸಿದ್ಧಪಡಿಸಿಕೊಂಡು ಪ್ರತಿ ಮೂರು ತಿಂಗಳಿಗೊಮ್ಮೆ ಮಾಹಿತಿಯನ್ನು ಉತ್ತಮಪಡಿಸಿಕೊಂಡಿರಬೇಕು.

16. ಇಲಾಖೆಯ ಯೋಜನೆಗಳ ಉಪಯೋಗ ಪಡೆದಿದ್ದಲ್ಲಿ ಅವುಗಳ ಮರುಪಾವತಿ ಬಗ್ಗೆ ದಾಖಲೆಗಳನ್ನು ಒಟ್ಟು ಫಲಾನುಭವಿಗಳೊಂದಿಗೆ ಸತತ ಸಂಪರ್ಕ ಇಟ್ಟುಕೊಂಡು ಅವರಿಂದ ಕೆಲಸಗಳನ್ನು ನಿರ್ವಹಿಸುವುದು.

17. ಸ್ಥಳೀಯ ಸಂಘ ಸಂಸ್ಥೆಗಳೊಂದಿಗೆ ಸಂಪರ್ಕ ಇಟ್ಟು ಅವುಗಳ ಪ್ರಯೋಜನವನ್ನು ಪಡೆಯುವುದು.

(ವಿ. ಶಿವಕುಮಾರ್)
ಸರ್ಕಾರದ ಅಧೀನ ಕಾರ್ಯದರ್ಶಿ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಸರ್ಕಾರದ ಆದೇಶ ಸಂ: ಮಮಇ/237/ಪಿ.ಹೆಚ್.ಪಿ/2007/ದಿ: 16-8-2007ಕ್ಕೆ

## ಅನುಬಂಧ-2

### ವಿವಿಧೋದ್ದೇಶ ಪುನರ್ವಸತಿ ಕಾರ್ಯಕರ್ತರು (VRWs) ಗಳ ಕರ್ತವ್ಯ ಪಟ್ಟಿ

1. ಇವರು ಪದವೀಧರರಾಗಿದ್ದು ಅಂಗವಿಕಲ ವ್ಯಕ್ತಿಯಾಗಿರಬೇಕು. ಇವರು ತಾಲ್ಲೂಕು ಕೇಂದ್ರ ಸ್ಥಾನದಲ್ಲಿ ವಾಸಿಸುತ್ತಿರಬೇಕು.
2. ಇವರು 18-45 ವರ್ಷ ವಯೋಮಿತಿಯವರಾಗಿದ್ದು ಆರೋಗ್ಯವಂತರಾಗಿರಬೇಕು.
3. ತಾಲ್ಲೂಕಿನ ವ್ಯಾಪ್ತಿಗೆ ಬರುವ ಎಲ್ಲಾ ಗ್ರಾಮ ಪಂಚಾಯ್ತಿಯಲ್ಲಿನ ಅಂಗವಿಕಲರ ಮೂಲಭೂತ ಮಾಹಿತಿಯನ್ನು VRWs ಗಳಿಂದ ಪಡೆದು ಪರಿಷ್ಕರಿಸಿ ಪಂಚಾಯ್ತಿವಾರು ಹಾಗೂ ಅಂಗವಿಕಲತೆವಾರು ಸಿದ್ಧಪಡಿಸಿ ನಿರ್ವಹಿಸುವುದು.
4. ವಾರಕ್ಕೆ ಕನಿಷ್ಠ 3-4 ಪಂಚಾಯ್ತಿಗಳಿಗೆ ಭೇಟಿ ನೀಡಿ ಅಲ್ಲಿನ ಸಮಸ್ಯೆಗಳ ಬಗ್ಗೆ VRWಗಳಿಂದ ಮಾಹಿತಿ ಪಡೆದು ಪರಿಹಾರಿಕ ಕ್ರಮವನ್ನು ಕೈಗೊಳ್ಳುವುದು.
5. ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳೊಂದಿಗೆ ಸತತ ಸಂಪರ್ಕವಿಟ್ಟುಕೊಂಡು ಅರ್ಹ ಅಂಗವಿಕಲರಿಗೆ ಸಾಧನ ಸಲಕರಣೆ, ಗುರ್ತಿನ ಚೀಟಿ, ವೈದ್ಯಕೀಯ ಪ್ರಮಾಣ ಪತ್ರ ಮತ್ತು ಬಸ್‌ಪಾಸ್, ಶಿಕ್ಷಣ, ವಸತಿ ಹಾಗೂ ಉದ್ಯೋಗ ಕಲ್ಪಿಸುವ ಬಗ್ಗೆ ಕ್ರಮ ಕೈಗೊಳ್ಳಬೇಕು.
6. VRWs ಗಳಿಗೆ ಗ್ರಾಮೀಣ ಮಟ್ಟದಲ್ಲಿ ಜಾಗೃತಿ ಶಿಬಿರಗಳನ್ನು ಏರ್ಪಡಿಸಲು ಸಹಕರಿಸುವುದರೊಂದಿಗೆ ಅದೇ ರೀತಿಯ ಜಾಗೃತಿ ಶಿಬಿರಗಳನ್ನು ಸ್ಥಳೀಯರ ಸಹಕಾರದೊಂದಿಗೆ ಏರ್ಪಡಿಸಿ DDWO ಗಳಿಗೆ ವರದಿ ಮಾಡುವುದು.
7. ಗ್ರಾಮ ಪಂಚಾಯ್ತಿ ಮಟ್ಟದಲ್ಲಿ ಸ್ವಸಹಾಯ ಗುಂಪನ್ನು ರಚಿಸುವುದು, ರಚನೆಯಾದ ಸ್ವಸಹಾಯ ಗುಂಪುಗಳ ಬಲವರ್ಧನೆ ಹಾಗೂ ಅವುಗಳಿಗೆ ವಿವಿಧ ಇಲಾಖೆಗಳಿಂದ ಸಿಗಬೇಕಾದ ಸೌಲಭ್ಯಗಳ ಬಗ್ಗೆ ಕ್ರಮ ಕೈಗೊಳ್ಳುವುದು.
8. ತಾಲ್ಲೂಕಿನ ಉದ್ಯೋಗಕ್ಕಾಗಿ ನೋಂದಾಯಿಸಿರುವ ಅಂಗವಿಕಲರ ವಿವರಗಳನ್ನು ಪ್ರತ್ಯೇಕ ನಿರ್ವಹಿಸಿ ಅವರುಗಳಿಗೆ ಇಲಾಖಾ ವತಿಯಿಂದ ಹಮ್ಮಿಕೊಂಡಿರುವ ಉದ್ಯೋಗ ಸಿಗುವಂತೆ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳೊಂದಿಗೆ ಸಹಕರಿಸುವುದು.
9. ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು ಹಾಗೂ ತಾಲ್ಲೂಕು ಪಂಚಾಯ್ತಿ ನಡುವೆ ಸೇತುವೆಯಂತಿದ್ದು ತಾಲ್ಲೂಕು ಪಂಚಾಯ್ತಿ ವತಿಯಿಂದ ಅಂಗವಿಕಲರಿಗೆ ಸಲ್ಲಿಸಬೇಕಾದ ಶೇಕಡ 3 ರಷ್ಟು ಆಯವ್ಯಯವನ್ನು ಅವರಿಗೆ ತಲುಪುವಂತೆ ಮಾಡುವಲ್ಲಿ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿರವರೊಂದಿಗೆ ಸಹಕರಿಸುವುದು. ಈ ಬಗ್ಗೆ VRWಗಳಿಗೆ ಮಾರ್ಗದರ್ಶನ ನೀಡುವುದು.

10. ಸ್ವಯಂ ಉದ್ಯೋಗಕ್ಕಾಗಿ ಅಂಗವಿಕಲರು ಇಲಾಖೆಯಿಂದ ಪಡೆದ ಸಾಲದ ಸದ್ವಿನಿಯೋಗವಾಗುತ್ತಿದೆಯೇ ಎಂಬುದರ ಬಗ್ಗೆ ಫಲಾನುಭವಿಗಳು ಸಾಲ ಮರುಪಾವತಿಯನ್ನು ಸಕಾಲದಲ್ಲಿ ಮಾಡುವಂತೆ ಕ್ರಮ ಕೈಗೊಳ್ಳಬೇಕು.

11. ಸ್ಥಳೀಯ ಸಂಘ ಸಂಸ್ಥೆಗಳ ಹಾಗೂ ಇತರೆ ಸಂಪನ್ಮೂಲಗಳನ್ನು ಕ್ರೋಢೀಕರಿಸಿ ಮಾಹಿತಿ ಇಟ್ಟುಕೊಳ್ಳುವುದು.

12. ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು ಹಾಗೂ VRW ನಡುವೆ ಸಮನ್ವಯ ಸಾಧಿಸಿ ಗ್ರಾಮೀಣ ಮಟ್ಟದಲ್ಲಿನ ಸಮಸ್ಯೆಗಳನ್ನು ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳಿಗೆ ಮುಟ್ಟಿಸಿ ಅವುಗಳಿಗೆ ಪರಿಹಾರ ಸಿಗುವಂತೆ ಹಿಂಬಾಲಿಕ ಕ್ರಮ ಕೈಗೊಳ್ಳಬೇಕು.

13. VRWಗಳ ಕಾರ್ಯಾಚರಣೆಯನ್ನು ಸತತವಾಗಿ ಮೇಲ್ವಿಚಾರಣೆ ಮಾಡುವುದು ಹಾಗೂ ಸಕಾಲಿಕ ಮಾರ್ಗದರ್ಶನ ತರಬೇತಿ ನೀಡುವುದು.

14. ನಿಗದಿತ ನಮೂನೆ ಹಾಗೂ ರಿಜಿಸ್ಟರ್‌ಗಳಲ್ಲಿ ಮಾಹಿತಿಯನ್ನು ನಿರ್ವಹಿಸಿ ಪ್ರತಿ ತಿಂಗಳು VRWಗಳಿಂದ ಪಡೆದ ಮಾಹಿತಿಯನ್ನು ಕ್ರೋಢೀಕರಿಸಿ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳಿಗೆ ವರದಿ ಮಾಡುವುದು.

15. ಅವರು ತಹಸೀಲ್ದಾರ್ ಕಚೇರಿಯಲ್ಲಿ ಸ್ಥಾನಿಕರಾಗಿರುತ್ತಾರೆ.

(ವಿ. ಶಿವಕುಮಾರ್)
ಸರ್ಕಾರದ ಅಧೀನ ಕಾರ್ಯದರ್ಶಿ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

**ಸರ್ಕಾರದ ಆದೇಶ ಸಂ: ಮಮಇ/237/ಪಿ.ಹೆಚ್.ಪಿ. 2007/ದಿ: 16-8-2007ಕ್ಕೆ ಅನುಬಂಧ - 3**

**I. VRWs ಮತ್ತು MRWsಗಳನ್ನು ಆಯ್ಕೆ ಮಾಡಲು ತಾಲ್ಲೂಕು ಮಟ್ಟದಲ್ಲಿ ರಚಿಸಿರುವ ಸಮಿತಿ:**

1. ಕಾರ್ಯ ನಿರ್ವಹಣಾಧಿಕಾರಿಗಳು, ತಾಲ್ಲೂಕು ಪಂಚಾಯಿತಿ — ಅಧ್ಯಕ್ಷರು
2. ಕ್ಷೇತ್ರ ಶಿಕ್ಷಣಾಧಿಕಾರಿಗಳು — ಸದಸ್ಯರು
3. ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ — ಸದಸ್ಯರು
4. ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು — ಸದಸ್ಯ ಕಾರ್ಯದರ್ಶಿಗಳು
5. ತಾಲ್ಲೂಕು ಮಟ್ಟದ ಪ್ರತಿಷ್ಠಿತ ಸ್ವಯಂ ಸೇವಾ ಸಂಸ್ಥೆಯ ಪ್ರತಿನಿಧಿ (ಕಾರ್ಯನಿರ್ವಹಣಾಧಿಕಾರಿಗಳು ಇವರನ್ನು ನಾಮ ನಿರ್ದೇಶನ ಮಾಡಬೇಕು) — ಸದಸ್ಯರು

ಪ್ರಕಟಣೆ ನೀಡಿ, ಅರ್ಜಿಗಳನ್ನು ಆಹ್ವಾನಿಸಿ, ಈ ಸಮಿತಿಯು 18-45 ವರ್ಷ ವಯಸ್ಸಿನ ಸ್ಥಳೀಯ ಎಸ್.ಎಸ್.ಎಲ್.ಸಿ. ಪಾಸ್ ಆದ ಅಂಗವಿಕಲರನ್ನು ಯೋಗ್ಯತೆಯನುಸಾರ ಗ್ರಾಮೀಣ ಪುನರ್ವಸತಿ ಕಾರ್ಯಕರ್ತರನ್ನಾಗಿ (VRWS) ಹಾಗೂ ಪದವಿ ಹೊಂದಿದ ಅಂಗವಿಕಲರನ್ನು ವಿವಿಧ ಉದ್ದೇಶ ಕಾರ್ಯಕರ್ತರನ್ನಾಗಿ (MRW) ಆಯ್ಕೆ ಮಾಡಲಾಗುವುದು.

**II. ತಾಲ್ಲೂಕು ಮಟ್ಟದಲ್ಲಿ ಗ್ರಾಮೀಣ ಅಂಗವಿಕಲರ ಪುನರ್ವಸತಿ ಕಾರ್ಯಕ್ರಮ ಅನುಷ್ಠಾನದ ಪರಿಶೀಲನಾ ಸಮಿತಿ:**

1. ಕಾರ್ಯನಿರ್ವಹಣಾಧಿಕಾರಿಗಳು — ಅಧ್ಯಕ್ಷರು
2. ಕ್ಷೇತ್ರ ಶಿಕ್ಷಣಾಧಿಕಾರಿಗಳು — ಸದಸ್ಯರು
3. ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು — ಸದಸ್ಯರು
4. ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ — ಸದಸ್ಯರು

5. ಸ್ವಯಂ ಸೇವಾ ಸಂಸ್ಥೆಯ ಪ್ರತಿನಿಧಿ — ಸದಸ್ಯರು

6. ವಿವಿಧೋದ್ದೇಶ ಪುನರ್ವಸತಿ ಕಾರ್ಯಕರ್ತರು — ಸದಸ್ಯ ಕಾರ್ಯದರ್ಶಿಗಳು

**ತಾಲ್ಲೂಕು ಮಟ್ಟದ ಸಮಿತಿಯ ಕರ್ತವ್ಯಗಳು:**

- ಗ್ರಾಮೀಣ ಪುನರ್ವಸತಿ ಕಾರ್ಯಕರ್ತರಿಗೆ ಅಗತ್ಯ ಮಾರ್ಗದರ್ಶನ ನೀಡುವುದು.
- ವಿವಿಧೋದ್ದೇಶ ಕಾರ್ಯಕರ್ತರ ಕಾರ್ಯ ಚಟುವಟಿಕೆಗಳನ್ನು ಪರಾಮರ್ಶಿಸಿ ಅಂಗವಿಕಲತೆಯುಳ್ಳ ವ್ಯಕ್ತಿಗಳಿಗೆ ಶಿಕ್ಷಣ, ಆರೋಗ್ಯ, ಪುನರ್ವಸತಿ ಮತ್ತಿತರ ಸೌಲಭ್ಯಗಳನ್ನು ಒದಗಿಸಲು ಅಗತ್ಯ ಕ್ರಮ ತೆಗೆದುಕೊಳ್ಳುವುದು.
- ಶಿಕ್ಷಣ, ಆರೋಗ್ಯ, ಸಮಾಜ ಕಲ್ಯಾಣ, ವ್ಯವಸಾಯ ಮುಂತಾದ ಎಲ್ಲಾ ಇಲಾಖೆಗಳ ಕಲ್ಯಾಣ ಯೋಜನೆಗಳಡಿಯಲ್ಲಿ ಸವಲತ್ತುಗಳನ್ನು ಅಂಗವಿಕಲರಿಗೆ ಒದಗಿಸಲು ಅಗತ್ಯ ಕ್ರಮ ತೆಗೆದುಕೊಳ್ಳುವುದು. (ಪ್ರತೀ ಇಲಾಖೆಯ ಕಾರ್ಯಕ್ರಮಗಳಲ್ಲಿ ಶೇಕಡ 3% ರಷ್ಟು ಅಂಗವಿಕಲರಿಗೆ ಸಿಗಬೇಕು)
- ತಾಲ್ಲೂಕು ಮಟ್ಟದ ಅಧಿಕಾರಿಗಳ ಸಭೆಗಳನ್ನು ಏರ್ಪಡಿಸಿ ಅಂಗವಿಕಲರಿಗೆ ಶಿಕ್ಷಣ, ಸ್ವಯಂ ಉದ್ಯೋಗ, ಮತ್ತಿತರ ಪುನರ್ವಸತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ಸ್ವಯಂ ಸೇವಾ ಸಂಸ್ಥೆಗೆ ಅವಕಾಶ ಕಲ್ಪಿಸುವುದು.
- ಇಲಾಖಾ ಯೋಜನೆಗಳಾದ ಆಧಾರ, ದೂರವಾಣಿ ಬೂತ್, ಸ್ವ-ಸಹಾಯ ಸಂಘಗಳ ರಚನೆ, ವಿದ್ಯಾರ್ಥಿ ವೇತನ, ಸ್ವಯಂ ಉದ್ಯೋಗ, ತರಬೇತಿ ಇತ್ಯಾದಿ ಯೋಜನೆಗಳಿಗೆ ಅರ್ಹ ಅಂಗವಿಕಲರನ್ನು ಆಯ್ಕೆ ಮಾಡಿ ಜಿಲ್ಲಾ ಸಮಿತಿಗೆ ಮಾಹಿತಿ ಒದಗಿಸುವುದು.
- ಅಂಗವಿಕಲರ ಅಗತ್ಯತೆಗಳಿಗನುಗುಣವಾಗಿ ಲಭ್ಯವಿರುವ ಸಂಪನ್ಮೂಲಗಳನ್ನು ಉಪಯೋಗಿಸಿಕೊಂಡು ಸಾಧನ ಸಲಕರಣೆಗಳು ತಾಲ್ಲೂಕು ಮಟ್ಟದಲ್ಲೇ ದೊರೆಯುವಂತೆ ಮಾಡುವುದು.
- ಸಮಾಜದ ಗಣ್ಯ ವ್ಯಕ್ತಿಗಳು, ಅಧಿಕಾರಿಗಳು, ಅಂಗವಿಕಲತೆಯುಳ್ಳ ವ್ಯಕ್ತಿಗಳು, ಜನ ಪ್ರತಿನಿಧಿಗಳು ಮುಂತಾದವರ ಸಭೆಗಳನ್ನು ಏರ್ಪಡಿಸಿ, ಸಮಾಜದಲ್ಲಿ ಅಂಗವಿಕಲರ ಬಗ್ಗೆ ಅರಿವು ಮೂಡಿಸಿ ಅವರಿಗಿರುವ ಕೀಳರಿಮೆಯನ್ನು ತೊಡೆದುಹಾಕುವುದು.
- ತಾಲ್ಲೂಕಿನ ಸಾರ್ವಜನಿಕ ಆಸ್ಪತ್ರೆ, ಪ್ರಾಥಮಿಕ ಆರೋಗ್ಯ ಕೇಂದ್ರ, ಪ್ರಾಥಮಿಕ ಆರೋಗ್ಯ ಘಟಕ, ಸ್ವಯಂ ಸೇವಾ ಸಂಸ್ಥೆಗಳು ಏರ್ಪಡಿಸುವ ವೈದ್ಯಕೀಯ ಶಿಬಿರಗಳು ಮುಂತಾದೆಡೆಗಳಲ್ಲಿ ಅಂಗವಿಕಲತೆಯುಳ್ಳ ವ್ಯಕ್ತಿಗಳಿಗೆ ಅಗತ್ಯ ವೈದ್ಯಕೀಯ ಚಿಕಿತ್ಸೆ ನೆರವು, ಸರ್ಜರಿ ಮುಂತಾದವುಗಳನ್ನು ಒದಗಿಸುವುದು ಮತ್ತು ಇದೇ ರೀತಿಯ ಕಾರ್ಯಕ್ರಮಗಳನ್ನು ಕೈಗೊಳ್ಳಲು ಗ್ರಾಮಮಟ್ಟದ ಸಮಿತಿಗೆ ತಿಳಿಸುವುದು ಸಹಕರಿಸುವುದು.
- ತಾಲ್ಲೂಕು ಮಟ್ಟದಲ್ಲಿ ವೈದ್ಯಕೀಯ ಶಿಬಿರಗಳನ್ನು ನಡೆಸಲು ಸ್ವಯಂ ಸೇವಾ ಸಂಸ್ಥೆಗೆ ಅಗತ್ಯ ಅನುಕೂಲ ಕಲ್ಪಿಸುವುದು. ಗ್ರಾಮೀಣ ಪುನರ್ವಸತಿ ಕಾರ್ಯಕ್ರಮ ಅನುಷ್ಠಾನದ ಬಗ್ಗೆ ತಿಂಗಳಿಗೆ ಒಮ್ಮೆ ಸಭೆ ನಡೆಸಿ ಪರಿಶೀಲಿಸುವುದು.

(ವಿ. ಶಿವಕುಮಾರ್)
ಸರ್ಕಾರದ ಅಧೀನ ಕಾರ್ಯದರ್ಶಿ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

**ಸರ್ಕಾರದ ಆದೇಶ ಸಂ: ಮಮಇ/237/ಪಿ.ಹೆಚ್.ಪಿ. 2007/ದಿ: 16-8-1007ಕ್ಕೆ ಅನುಬಂಧ-4**

**ಜಿಲ್ಲಾ ಮಟ್ಟದ ಗ್ರಾಮೀಣ ಅಂಗವಿಕಲರ ಪುನರ್ವಸತಿ ಕಾರ್ಯಕ್ರಮ ಯೋಜನೆಯ ಉಸ್ತುವಾರಿ ಸಮಿತಿ:**

1. ಜಿಲ್ಲಾಧಿಕಾರಿಗಳು — ಅಧ್ಯಕ್ಷರು

2. ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು ಉಪಾಧ್ಯಕ್ಷರು
3. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಸದಸ್ಯರು
4. ಉಪ ನಿರ್ದೇಶಕರು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಸದಸ್ಯರು
5. ಜಿಲ್ಲಾ ಶಸ್ತ್ರ ಚಿಕಿತ್ಸಕರು ಸದಸ್ಯರು
6. ಉಪ ನಿರ್ದೇಶಕರು, ಶಿಕ್ಷಣ ಇಲಾಖೆ ಸದಸ್ಯರು
7. ಜಿಲ್ಲಾ ಉದ್ಯೋಗಾಧಿಕಾರಿಗಳು ಸದಸ್ಯರು
8. ಜಿಲ್ಲಾ ಮಟ್ಟದಲ್ಲಿ ಅಂಗವಿಕಲರ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸಿದ ಪ್ರತಿಷ್ಠಿತ ಸ್ವಯಂ ಸೇವಾ ಸಂಸ್ಥೆಯ ಪ್ರತಿನಿಧಿ ಸದಸ್ಯರು
9. ಪ್ರತಿ ತಾಲ್ಲೂಕಿನ ವಿವಿಧೋದ್ದೇಶ ಪುನರ್ವಸತಿ ಕಾರ್ಯಕರ್ತರು ಸದಸ್ಯರು
10. ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿಗಳು ಸದಸ್ಯ ಕಾರ್ಯದರ್ಶಿಗಳು

**ಜಿಲ್ಲಾ ಮಟ್ಟದ ಸಮಿತಿಯ ಕರ್ತವ್ಯಗಳು:**

- ಗ್ರಾಮೀಣ ಅಂಗವಿಕಲರ ಪುನರ್ವಸತಿ ಯೋಜನೆಯು ಅನುಷ್ಠಾನಗೊಳ್ಳುತ್ತಿರುವ ಬಗ್ಗೆ ಕಾಲಕಾಲಕ್ಕೆ ಪರಾಮರ್ಶಿಸಿ ಅಗತ್ಯ ಮಾರ್ಗದರ್ಶನ ನೀಡುವುದರೊಂದಿಗೆ ಯೋಜನೆಯ ಸಂಪೂರ್ಣ ಲಾಭವು ಅಂಗವಿಕಲತೆಯುಳ್ಳ ವ್ಯಕ್ತಿಗಳಿಗೆ ದೊರೆಯುವಂತೆ ಮಾಡುವುದು.
- ತಾಲ್ಲೂಕು ಮಟ್ಟದ ಸಮಿತಿಗಳು ವ್ಯವಸ್ಥಿತವಾಗಿ ಕಾರ್ಯ ನಿರ್ವಹಿಸುವಂತೆ ಮಾಡುವುದು.
- ಜಿಲ್ಲೆಯಲ್ಲಿನ ಎಲ್ಲ ಅಂಗವಿಕಲತೆಯುಳ್ಳ ಮಕ್ಕಳು ಸಾಮಾನ್ಯ ಶಾಲೆಗಳಲ್ಲಿ ದಾಖಲಾಗಿ ಸಮನ್ವಯ ಶಿಕ್ಷಣಕ್ಕೆ ಒಳಪಡುವಂತೆ ಕ್ರಮ ತೆಗೆದುಕೊಳ್ಳುವುದು ಹಾಗೂ ವಿದ್ಯಾರ್ಥಿ ವೇತನ ಸಿಗುವಂತೆ ಮಾಡುವುದು.
- ಜಾರಿಯಲ್ಲಿರುವ ಯೋಜನೆಗಳಡಿಯಲ್ಲಿ ಸ್ವಯಂ ಉದ್ಯೋಗವನ್ನು ಕೈಗೊಳ್ಳುವಂತೆ ಅಂಗವಿಕಲರಲ್ಲಿ ಜಾಗೃತಿ ಮೂಡಿಸಲು ಅಗತ್ಯ ಕ್ರಮ ತೆಗೆದುಕೊಳ್ಳುವುದು.
- ಅಂಗವಿಕಲರ ಸ್ವ-ಸಹಾಯ ಸಂಘಗಳ ರಚನೆ ಹಾಗೂ ವಿವಿಧ ಇಲಾಖೆಗಳ ಸೌಲಭ್ಯಗಳ ಬಗ್ಗೆ ತಾಲ್ಲೂಕು ಸಮಿತಿಗ ಮಾರ್ಗದರ್ಶನ ನೀಡುವುದು.
- ಯೋಜನೆಯ ಅನುಷ್ಠಾನದ ಬಗ್ಗೆ ಪ್ರತಿ ಮೂರು ತಿಂಗಳಿಗೆ ಒಮ್ಮೆ ಪರಿಶೀಲನೆ ಸಭೆಯನ್ನು ಏರ್ಪಡಿಸಿ ತಾಲ್ಲೂಕು ಮಟ್ಟದ ಸಮಿತಿಗ ಸಲಹೆ ಮತ್ತು ಮಾರ್ಗದರ್ಶನ ನೀಡುವುದು.
- ನಿರ್ದೇಶಕರು, ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆ ಹಾಗೂ ಯೋಜನಾ ಸಂಯೋಜಕರೊಂದಿಗೆ ಸಂಪರ್ಕ ಇಟ್ಟು ಅನುಷ್ಠಾನದ ಬಗ್ಗೆ ಚರ್ಚಿಸುವುದು.
- ಗ್ರಾಮೀಣ ಅಂಗವಿಕಲರ ಪುನರ್ವಸತಿ ಕಾರ್ಯಕ್ರಮ ಸಮರ್ಪಕವಾಗಿ ಅನುಷ್ಠಾನಗೊಳಿಸುತ್ತಿರುವ ಬಗ್ಗ ತಾಲ್ಲೂಕಿನಲ್ಲಿ ಕಾಲಕಾಲಕ್ಕೆ ಅಗತ್ಯ ತನಿಖೆ ಕೈಗೊಂಡು ಯೋಜನೆಯು ವ್ಯವಸ್ಥಿತವಾಗಿ ನಿಗಧಿತ ಸಮಯದೊಳಗೆ ಜಾರಿಗೊಳ್ಳುವಂತೆ ಕ್ರಮ ತೆಗೆದುಕೊಳ್ಳುವುದು.
- ಇಲಾಖಾ ಯೋಜನೆಗಳಾದ ಆಧಾರ, ದೂರವಾಣಿ ಬೂತ್, ಅಂಗವಿಕಲ ಸ್ವಸಹಾಯ ಸಂಘಗಳ ರಚನೆ ತರಬೇತಿ ಮತ್ತು ಉದ್ಯೋಗ, ಸ್ವಯಂ ಉದ್ಯೋಗ ಇತ್ಯಾದಿ ಯೋಜನೆಗಳ ಅನುಷ್ಠಾನದ ಬಗ್ಗೆ ಉಸ್ತುವಾರಿ ವಹಿಸುವುದು.

• ಗ್ರಾಮೀಣಾಭಿವೃದ್ಧಿ, ನಗರಾಭಿವೃದ್ಧಿ ಇಲಾಖೆ ಅಡಿಯಲ್ಲಿನ SGSY ಮತ್ತು SJSY ಮಾಡಿ ಅಡಿಯಲ್ಲಿ ಅಂಗವಿಕಲರನ್ನು ಆಯ್ಕೆ ಮಾಡಿ ಸಹಾಯಧನ ನೀಡಿ ಸ್ವಯಂ ಉದ್ಯೋಗಿಗಳಾಗುವಂತೆ ಕ್ರಮ ವಹಿಸುವುದು.

(ವಿ. ಶಿವಕುಮಾರ್)
ಸರ್ಕಾರದ ಅಧೀನ ಕಾರ್ಯದರ್ಶಿ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಸರ್ಕಾರದ ಆದೇಶ ಸಂ: ಮಮಇ/237/ಪಿ.ಹೆಚ್.ಪಿ./2007/ದಿ: 16-8-2007ಕ್ಕೆ ಅನುಬಂಧ - 5

### ಗ್ರಾಮೀಣ ಅಂಗವಿಕಲರ ಪುನರ್ವಸತಿ ಕಾರ್ಯಕ್ರಮಕ್ಕೆ ತಗುಲುವ ವಾರ್ಷಿಕ ವೆಚ್ಚ

1. ಆವರ್ತಕ ವೆಚ್ಚ

| | |
|---|---|
| ಅ. ಗ್ರಾಮ ಪಂಚಾಯ್ತಿಗೆ ಒಬ್ಬರಂತೆ 5652 ಗ್ರಾಮ ಪಂಚಾಯ್ತಿಗಳಿಗೆ ಗ್ರಾಮೀಣ ಪುನರ್ವಸತಿ ಕಾರ್ಯಕರ್ತರ (VRW) ಗೌರವಧನ ಆಧಾರದ ನೇಮಕಾತಿ ಪ್ರತಿ VRW ಮಾಸಿಕ 700 ರೂ.ಗಳ ಗೌರವಧನ (5652x700x12) | 4,74,76,800-00 |
| ಆ. ಪ್ರತಿ ತಾಲ್ಲೂಕಿಗೆ ಒಬ್ಬರಂತೆ 176 ವಿವಿಧೋದ್ದೇಶ ಪುನರ್ವಸತಿ (MRW) ಕಾರ್ಯಕರ್ತರಿಗೆ ಗೌರವಧನ ಪ್ರತಿ MRWಗೆ ಮಾಸಿಕ 1800 ರೂ.ಗಳ ಗೌರವಧನ (176x1800x12) | 38,01,600-00 |
| ಇ. ರಾಜ್ಯ ಮಟ್ಟದಲ್ಲಿ ಯೋಜನಾ ಸಂಯೋಜಕರ ಸೇವೆಯನ್ನು ಗೌರವ ಧನದ ಆಧಾರ ಪಡೆಯುವುದು 10000x12x1(excluding TADA) | 1,20,000-00 |
| ಈ. MRWS ಗಳಿಗೆ ಲೇಖನ ಹಾಗೂ ಆಡಳಿತ ವೆಚ್ಚ - ಪ್ರತಿ ತಾಲ್ಲೂಕಿಗೆ ಮಾಸಿಕ 200/- ರೂ. ನಂತೆ (200x176x12) | 4,22,400-00 |
| ಉ. VRWs ಗಳಿಗೆ ಲೇಖನ ಸಾಮಾಗ್ರಿ ಹಾಗೂ ಆಡಳಿತ ವೆಚ್ಚ ಮಾಸಿಕ 50/- ರೂ. ನಂತೆ (5652x50x12) | 33,91,200-00 |
| ಊ. ರಾಜ್ಯ ಮಟ್ಟದಲ್ಲಿ ಆಡಳಿತ ವೆಚ್ಚ | 80,000-00 |
| ಒಟ್ಟು | 5,52,92,000-00 |

2. ಅನಾವರ್ತಕ ವೆಚ್ಚ

| | |
|---|---|
| ತರಬೇತಿ ಮತ್ತು ಕಾರ್ಯಾಗಾರ | |
| ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿ ಮತ್ತು ತಹಸೀಲ್ದಾರ್‌ರವರಿಗೆ ಒಂದು ದಿನ ರಾಜ್ಯಮಟ್ಟದ / ವಿಭಾಗ ಮಟ್ಟದ ಕಾರ್ಯಾಗಾರ | 2,00,000-00 |

3. 5652 VRW ಗಳಿಗೆ ಹಾಗೂ 176 MRW ಗಳಿಗೆ ವಿಭಾಗಮಟ್ಟ /ತಾಲ್ಲೂಕು ಮಟ್ಟದಲ್ಲಿ 2 ದಿವಸಗಳ ವಸತಿಯುತ ತರಬೇತಿ ಕಾರ್ಯಕ್ರಮ (100x5828x28) — 11,65,600-00

| | | |
|---|---|---|
| 4. | ತರಬೇತಿ ಸಲಕರಣೆಗಳು - ಪ್ರತಿ ಅಭ್ಯರ್ಥಿಗೆ ರೂ. 400 ರೂ. ನಂತೆ (400x5828) | 23,31,200-00 |
| 5. | ಬೋಧಕರಿಗೆ ಗೌರವಧನ 3 ಮಂದಿಗೆ ಪ್ರತಿ ಬೋಧಕರಿಗೆ ದಿನವೊಂದಕ್ಕೆ 200 ರೂ. ನಂತೆ (200x3x2x176) | 2,11,200-00 |
| | ಒಟ್ಟು | 39,08,000-00 |

ಘೋಷ್ವಾರೆ

| | |
|---|---|
| ಆವರ್ತಕ ವೆಚ್ಚ | 5,52,92,000-00 |
| ಅನಾವರ್ತಕ ವೆಚ್ಚ | 39,08,000-00 |
| ಒಟ್ಟು | 5,92,00,000-00 |

ಟಿಪ್ಪಣಿ: ಅ ಮತ್ತು ಆ ನಲ್ಲಿ ತಿಳಿಸಿರುವ MRW ಮತ್ತು VRWs ಗಳ ಇಟ್ಟು 5828 ಹುದ್ದೆಗಳನ್ನು ಭಾಗಶಃ ಅಂಧರಿಗೆ ಭಾಗಶಃ ಶ್ರವಣದೋಷವುಳ್ಳವರಿಗೆ (Mild ಮತ್ತು Moderate) ಹಾಗೂ ದೈಹಿಕ ಅಂಗವಿಕಲರಿಗೆ ಸಮವಾಗಿ ಹಂಚಬೇಕಿದೆ.

(ವಿ. ಶಿವಕುಮಾರ್)
ಸರ್ಕಾರದ ಅಧೀನ ಕಾರ್ಯದರ್ಶಿ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಕರ್ನಾಟಕ ಸರ್ಕಾರ

ಸಂಖ್ಯೆ: ಮಮಇ 237.ಪಿಹೆಚ್‌ಪಿ.2007

ಕರ್ನಾಟಕ ಸರ್ಕಾರ ಸಚಿವಾಲಯ
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ: 27-09-2007

### ತಿದ್ದುಪಡಿ / ಸೇರ್ಪಡೆ ಆದೇಶ

2007-08ನೇ ಸಾಲಿನಿಂದ ಅಂಗವಿಕಲರಿಗಾಗಿ ಗ್ರಾಮೀಣ ಪುನರ್ವಸತಿ ಕಾರ್ಯಕ್ರಮ ಎಂಬ ಹೊಸ ಯೋಜನೆಯನ್ನು ಜಾರಿಗೊಳಿಸಲು ಮಂಜೂರು ನೀಡಿ ಹೊರಡಿಸಲಾದ ಸರ್ಕಾರಿ ಆದೇಶ ಸಂಖ್ಯೆ: ಮಮಇ: 237: ಪಿಹೆಚ್‌ಪಿ:2007 ದಿನಾಂಕ: 18-6-07ರ ಅನುಬಂಧ (3) ರಲ್ಲಿ ತಿಳಿಸಿರುವ VRW ಮತ್ತು MRW ಗಳನ್ನು ಆಯ್ಕೆ ಮಾಡಲು ತಾಲ್ಲೂಕು ಮಟ್ಟದಲ್ಲಿ ರಚಿಸಿರುವ ಸಮಿತಿಯಲ್ಲಿ ಕ್ರಮಸಂಖ್ಯೆ (4) ರಲ್ಲಿ ನಮೂದಿಸಿರುವ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳನ್ನು 'ಸದಸ್ಯ ಕಾರ್ಯದರ್ಶಿಗಳು' ಎಂಬುದರ ಬದಲಾಗಿ 'ಸದಸ್ಯರು' ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು ಮತ್ತು ಸದರಿ ಸಮಿತಿಯ ಕ್ರಮಸಂಖ್ಯೆ (6) ರಲ್ಲಿ ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿಗಳನ್ನು 'ಸದಸ್ಯ ಕಾರ್ಯದರ್ಶಿ' ಎಂದು ಸೇರ್ಪಡೆ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

(ವಿ. ಶಿವಕುಮಾರ್)

ಇವರಿಗೆ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ,

ಸಂಕಲನಕಾರರು, ಕರ್ನಾಟಕ ರಾಜ್ಯಪತ್ರ, ಬೆಂಗಳೂರು - ಮುಂದಿನ ಸಂಚಿಕೆಯಲ್ಲಿ ಪ್ರಕಟಿಸುವಂತೆ ಹಾಗೂ ಆದೇಶದ 250 ಪ್ರತಿಗಳನ್ನು ಒದಗಿಸುವಂತೆ ಕೋರಲಾಗಿದೆ.

17

252

# ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ:- ರಾಜ್ಯದಲ್ಲಿ ವಿಕಲಚೇತನರಿಗಾಗಿ ಉದ್ಯೋಗಕೋಶ - ಸ್ವಯಂಸೇವಾ ಸಂಸ್ಥೆಯನ್ನು ಗುರುತಿಸುವ ಬಗ್ಗೆ - ಆದೇಶ

ಓದಲಾಗಿದೆ:-

1.ಸರ್ಕಾರಿ ಆದೇಶ ಸಂಖ್ಯೆ:ಮಮಇ 14 ಪಿಹೆಚ್‌ಪಿ 2012 ದಿನಾಂಕ:15.6.2012

2.ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರ ಪತ್ರ ಸಂಖ್ಯೆ:ವಿಹಿನಾಸಇ/ಸಿ-9/ಆಯವ್ಯಯಶಾಖೆ/ಉಕೋ/03/2012-13/2096 ದಿನಾಂಕ:30.07.2012

3.ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರ ಪತ್ರ ಸಂಖ್ಯೆ:ವಿಹಿನಾಸಇ/ಸಿ-9/ಆಯವ್ಯಯಶಾಖೆ/ಉಕೋ/03/2012-13/4130 ದಿನಾಂಕ:26. 12.2012

4.ಸರ್ಕಾರದ ಪತ್ರ ಸಂಖ್ಯೆ:ಮಮಇ 14 ಪಿಹೆಚ್‌ಪಿ 2012 ದಿನಾಂಕ:27.12.2012.

5. ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರ ಪತ್ರ ಸಂಖ್ಯೆ:ವಿಹಿನಾಸಇ/ಸಿ-9/ಆಯವ್ಯಯಶಾಖೆ/ಉಕೋ/03/2012-13/4250 ದಿನಾಂಕ:15.01.2013

6.ಸರ್ಕಾರಿ ಆದೇಶ ಸಂಖ್ಯೆ:ಮಮಇ 14 ಪಿಹೆಚ್‌ಪಿ 2012 ದಿನಾಂಕ:27.01.2013

7. ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರ ಪತ್ರ ಸಂಖ್ಯೆ:ವಿಹಿನಾಸಇ/ಸಿ-9/ಆಯವ್ಯಯಶಾಖೆ/ಉಕೋ/03/2012-13/4545 ದಿನಾಂಕ:29.01.2013

8.ದಿನಾಂಕ:04.02.2013 ಮತ್ತು ದಿನಾಂಕ:8.2.2013 ರಂದು ನಡೆದ ಆಯ್ಕೆ ಸಮಿತಿ ಸಭೆಯ ನಡವಳಿಗಳು

## ಪ್ರಸ್ತಾವನೆ: -

ಮೇಲೆ ಉಲ್ಲೇಖ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯ ವತಿಯಿಂದ ಬೆಂಗಳೂರಿನಲ್ಲಿ ವಿಕಲಚೇತನರಿಗಾಗಿ ಉದ್ಯೋಗ ಕೋಶವನ್ನು ಸ್ವಯಂಸೇವಾ ಸಂಸ್ಥೆಗಳ ಮುಖಾಂತರ ನಡೆಸಬೇಕಾಗಿದ್ದು, ಅದರಂತೆ ಸ್ವಯಂಸೇವಾ ಸಂಸ್ಥೆಗಳನ್ನು ಆಯ್ಕೆ ಮಾಡಲು ಅನುಸರಿಸಬೇಕಾದ ಮಾರ್ಗಸೂಚಿ, ಷರತ್ತುಗಳು ಮತ್ತು ಉದ್ಯೋಗಕೋಶದ ನಿರ್ವಹಣೆಗಾಗಿ ತಗಲಬಹುದಾದ ವಾರ್ಷಿಕ ವೆಚ್ಚಗಳನ್ನೊಳಗೊಂಡಂತೆ ಕ್ರಮವಾಗಿ ಅನುಬಂಧ-1 ಮತ್ತು 2 ರಲ್ಲಿ ವಿವರಿಸಿ ಈ ಯೋಜನೆಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ:2235-02-101-0-55 ಯೋಜನೆ ಉಪ ಲೆಕ್ಕ ಶೀರ್ಷಿಕೆ:059 ಇತರೆ ಖರ್ಚುಗಳ ಅಡಿಯಲ್ಲಿ 2012-13ನೇ ಸಾಲಿನಲ್ಲಿ ಲಭ್ಯವಿರುವ ರೂ.86.00 ಲಕ್ಷಗಳ ಆಯವ್ಯಯದಲ್ಲಿ ಭರಿಸಲು ಆಡಳಿತಾತ್ಮಕ ಅನುಮೋದನೆ ನೀಡಿ ಮಂಜೂರಾತಿ ಆದೇಶವನ್ನು ಹೊರಡಿಸಿದೆ.

ಬೆಂಗಳೂರಿನಲ್ಲಿ ವಿಕಲಚೇತನರಿಗೆ ಉದ್ಯೋಗಕೋಶ ಪ್ರಾರಂಭಿಸುವ ಸಂಬಂಧ ದಿ:25.6.2012ರ ಪ್ರಜಾವಾಣಿ ದಿನಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಿ ಅರ್ಹ ಸ್ವಯಂಸೇವಾ ಸಂಸ್ಥೆಗಳಿಂದ ಅರ್ಜಿಗಳನ್ನು



-251-



ನಿಯಮಾನುಸಾರ ಆಹ್ವಾನಿಸಿದ್ದು, 14 ಸ್ವಯಂಸೇವಾ ಸಂಸ್ಥೆಗಳಿಂದ ಅರ್ಜಿಗಳನ್ನು ಸ್ವೀಕರಿಸಿದ್ದರೂ, ಕೇವಲ 7 ಸಂಸ್ಥೆಗಳು ಮಾತ್ರ ನಿಗದಿತ ದಿನಾಂಕದೊಳಗೆ ಅರ್ಜಿ ಸಲ್ಲಿಸಿದ್ದು, ಉಳಿದಂತೆ ಒಂದು ಅರ್ಜಿಯನ್ನು ನಿಗದಿಪಡಿಸಿದ ಕೊನೆಯ ದಿನಾಂಕದ ನಂತರ ಸ್ವೀಕರಿಸಿದ್ದು, ಈ ರೀತಿ 8 ಸಂಸ್ಥೆಗಳ ಪೈಕಿ 02 ಸಂಸ್ಥೆಗಳು ತಮ್ಮ ದಾಖಲಾತಿಗಳನ್ನು ವಿಳಂಬವಾಗಿ ಸಲ್ಲಿಸಿರುವುದರಿಂದ, ಇವುಗಳನ್ನು ಪರಿಗಣಿಸಲು ಅವಕಾಶವಿಲ್ಲವೆಂದು ಉಳಿದಂತೆ 6 ಸಂಸ್ಥೆಗಳ ಪೈಕಿ ಈ ಕೆಳಕಂಡ ಅರ್ಹವಿರುವ ಸಂಸ್ಥೆಗಳಲ್ಲಿ ಒಂದು ಸಂಸ್ಥೆಯನ್ನು ಆಯ್ಕೆಗೊಳಿಸಲು ಮಾನ್ಯ ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆಯುವ ಸಮಿತಿ ಸಭೆಯಲ್ಲಿ ತೀರ್ಮಾನಿಸಿ ಆದೇಶ ಹೊರಡಿಸಲು ಉಲ್ಲೇಖ(2)ರಲ್ಲಿ ಪ್ರಸ್ತಾಪಿಸಿರುತ್ತಾರೆ. ಹಾಗೂ ಬೆಂಗಳೂರಿನಲ್ಲಿ ಉದ್ಯೋಗಕೋಶವನ್ನು ಸ್ವಯಂಸೇವಾ ಸಂಸ್ಥೆಗಳ ಮುಖಾಂತರ ನಡೆಸಲು ಸ್ವಯಂಸೇವಾ ಸಂಸ್ಥೆಗಳನ್ನು ಆಯ್ಕೆ ಮಾಡಲು ಅನುಸರಿಸಬೇಕಾದ ಮಾರ್ಗಸೂಚಿಗಳು ಮತ್ತು ಷರತ್ತುಗಳೊಂದಿಗೆ ಪರಿಶೀಲಿಸಬೇಕಾಗಿದ್ದು, ಅದರಂತೆ ಆಡಳಿತಾಧಿಕಾರಿ, ಶ್ರೀ ಜಗದ್ಗುರು ತೋಂಟದಾರ್ಯ ವಿದ್ಯಾಪೀಠ, ಗದಗ ಇವರು ಸಲ್ಲಿಸಿದ ಪ್ರಸ್ತಾವನೆಯನ್ನು ಪರಿಶೀಲಿಸಿ ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿ, ಬೆಂಗಳೂರು ಇವರು ನಡೆಸಿ ಸಲ್ಲಿಸಿದ ತಪಾಸಣಾ ವರದಿಯನ್ನು ಸರ್ಕಾರದ ಮುಂದಿನ ಕ್ರಮಕ್ಕಾಗಿ ಉಲ್ಲೇಖ(3)ರಲ್ಲಿ ಕಳುಹಿಸಿರುತ್ತಾರೆ.

1.ಮೆ:ಸಮರ್ಥನಂ ಟ್ರಸ್ಟ್ ಫಾರ್ ದಿ ಡಿಸೇಬಲ್ಡ್, ಜೆ.ಪಿ.ನಗರ, ಬೆಂಗಳೂರು.
2.ಮೆ:ಎನೇಬಲ್ ಇಂಡಿಯಾ, ಕೋರಮಂಗಲ, ಬೆಂಗಳೂರು-95.
3.ಮೆ:ಭಾರತೀಯ ಸೇವಾ ಸಂಸ್ಥೆ, ಟಿ.ದಾಸರಹಳ್ಳಿ, ಬೆಂಗಳೂರು.
4.ಮೆ:ಅರ್ಚನ ಎಜುಕೇಷನ್ ಅಂಡ್ ವೆಲ್ಫೇರ್ ಟ್ರಸ್ಟ್, ಜೆ.ಪಿ.ನಗರ, ಬೆಂಗಳೂರು.
5.ಶ್ರೀ.ಗಜಾನನ ತರುಣ ಸಂಘ, ಗುಲ್ಬರ್ಗಾ.
6.ಮೆ:ವಿಶ್ವಾಸ್ ಸಮಗ್ರ ಗ್ರಾಮೀಣಾಭಿವೃದ್ಧಿ ಸಂಸ್ಥೆ, ನೆಲಮಂಗಲ, ಬೆಂಗಳೂರು.

ದಿನಾಂಕ:30.07.2012ರ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಕಾರ್ಯಕ್ರಮ ಅನುಷ್ಠಾನಕ್ಕಾಗಿ ಕೇವಲ ಕನಿಷ್ಠ ಪ್ರಸ್ತಾವನೆಗಳು ಬಂದಿರುವ ಕಾರಣ 7 ದಿನಗಳ ಕಾಲಾವಕಾಶ ನೀಡಿ ಮರು ಪ್ರಕಟಣೆ ಹೊರಡಿಸಿದ ನಂತರ ಬಂದಂತಹ ಪ್ರಸ್ತಾವನೆಗಳನ್ನು ಸ್ವಯಂಸೇವಾ ಸಂಸ್ಥೆಗಳ ಆಯ್ಕೆ ಕುರಿತಂತೆ ನಿಗದಿಪಡಿಸಿರುವ ಮಾನದಂಡ ಅಂಶಗಳನ್ನೊಳಗೊಂಡಂತೆ ನಿಗದಿತ ನಮೂನೆಯಲ್ಲಿ ಅಳವಡಿಸಿ ಪ್ರಸ್ತಾವನೆಯನ್ನು ಕಳುಹಿಸುವಂತೆ ಉಲ್ಲೇಖ(4) ರ ಸರ್ಕಾರಿ ಪತ್ರದಲ್ಲಿ ಕೋರಲಾಗಿತ್ತು. ಅದರಂತೆ ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರು ಉಲ್ಲೇಖಿತ(5) ಮತ್ತು (6)ರ ಪ್ರಸ್ತಾವನೆಗಳಲ್ಲಿ ಬೆಂಗಳೂರಿನಲ್ಲಿ ಉದ್ಯೋಗಕೋಶ ಪ್ರಾರಂಭಿಸುವ ಸಂಬಂಧ ದಿ:25.6.2012ರಂದು ಪ್ರಜಾವಾಣಿ ದಿನಪತ್ರಿಕೆಯಲ್ಲಿ 2ನೇ ಬಾರಿಗೆ ಮರು ಪ್ರಕಟಣೆಯನ್ನು ದಿ:31.12.2012 ರಂದು ಹೊರಡಿಸಿದ್ದು, ದಿ:5.1.2013 ರವರೆಗೆ ಅರ್ಜಿಗಳನ್ನು ವಿತರಿಸಲು ಕೊನೆಯ ದಿನಾಂಕವನ್ನು ನಿಗದಿಪಡಿಸಿದಂತೆ 9 ಸ್ವಯಂಸೇವಾ ಸಂಸ್ಥೆಗಳು ಅರ್ಜಿಯನ್ನು ಪಡೆದು 8 ಸ್ವಯಂಸೇವಾ ಸಂಸ್ಥೆಗಳು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ ದಿ:7.1.2013 ರ ಸಂಜೆಯೊಳಗೆ ಪ್ರಸ್ತಾವನೆಯನ್ನು ಸಲ್ಲಿಸಿದ್ದು, ಈ ಸ್ವಯಂಸೇವಾ ಸಂಸ್ಥೆಗಳ ಪೈಕಿ ಅರ್ಹ 1 ಸಂಸ್ಥೆಯನ್ನು ಆಯ್ಕೆಗೊಳಿಸಲು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ

ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ - ಅಧ್ಯಕ್ಷರು ಮತ್ತು ನಿರ್ದೇಶಕರು, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ - ಸದಸ್ಯ ಕಾರ್ಯದರ್ಶಿ ಹಾಗೂ ವಿವಿಧ ಸಂಬಂಧಿಸಿದ ಸರ್ಕಾರಿ ಇಲಾಖೆಗಳ ಮುಖ್ಯಸ್ಥರಗಳ ಪ್ರತಿನಿಧಿಗಳನ್ನೊಳಗೊಂಡ ಸಮಿತಿ ಸಭೆಯಲ್ಲಿ ಚರ್ಚಿಸಿ ಆದೇಶ ಹೊರಡಿಸಲು ಕೋರಿರುತ್ತಾರೆ.

2012-13ನೇ ಸಾಲಿನಿಂದ ವಿಕಲಚೇತನರಿಗೆ ಉದ್ಯೋಗಕೋಶ ಪ್ರಾರಂಭಿಸುವ ಯೋಜನೆಯನ್ನು ಸ್ವಯಂಸೇವಾ ಸಂಸ್ಥೆಯ ಮೂಲಕ ಅನುಷ್ಠಾನಗೊಳಿಸಲು 2ನೇ ಬಾರಿ ಆಹ್ವಾನಿಸಿದ ಅರ್ಜಿಗಳನ್ನು ಒಟ್ಟುಗೂಡಿಸಿ ಒಟ್ಟು 16 ಸ್ವಯಂಸೇವಾ ಸಂಸ್ಥೆಗಳ ಅರ್ಜಿಗಳನ್ನು ಒಗ್ಗೂಡಿಸಿ ಅರ್ಹ ಸ್ವಯಂಸೇವಾ ಸಂಸ್ಥೆಯನ್ನು ಗುರುತಿಸಲು ಆಯ್ಕೆ ಸಮಿತಿ ಸಭೆಯನ್ನು ಕರೆಯಲು ದಿನಾಂಕವನ್ನು ಗೊತ್ತುಪಡಿಸುವಂತೆ ಉಲ್ಲೇಖ(7)ರ ಪತ್ರದಲ್ಲಿ ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರು ಕೋರಿರುತ್ತಾರೆ. ಅದರಂತೆ, ದಿ:4.2.2013 ರಂದು ನಡೆದ ಸಭೆಯಲ್ಲಿ 2 ದಿನಪತ್ರಿಕೆ ಪ್ರಕಟಣೆಗಳಂತೆ ಸ್ವೀಕರಿಸಿದ 16 ಅರ್ಜಿಗಳನ್ನು ಆಯ್ಕೆ ಸಮಿತಿಯು ಪರಿಶೀಲಿಸಿ ಅರ್ಹ ಈ ಕೆಳಕಂಡ 3 ಸ್ವಯಂಸೇವಾ ಸಂಸ್ಥೆಗಳನ್ನು ಆಯ್ಕೆಗೊಳಿಸಿ, (1) M/s. Samarthanam Trust for the Disabled, Bangalore (2) M/s. Enable India, Bangalore. (3) M/s. Sri.Jagdguru Thotadarya Vidyapita, Bangalore ಈ ಸಂಸ್ಥೆಗಳು ಹೊಂದಿರುವ ಈ ಕೆಳಕಂಡ ಮೂಲಭೂತ ಸೌಕರ್ಯ ಹಾಗೂ ಪರಿಕರಗಳು ಮತ್ತು ಅನುಭವದ ಆಧಾರದ ಮೇಲೆ ಸ್ವಯಂಸೇವಾ ಸಂಸ್ಥೆಗಳನ್ನು ಗುರುತಿಸಲು 3 ಸದಸ್ಯರನ್ನೊಳಗೊಂಡ ತನಿಖಾ ತಂಡವನ್ನು ರಚಿಸಿದೆ.

| | |
|---|---|
| 1. | ಕಾರ್ಯಕಾರಿ ನಿರ್ದೇಶಕರು,<br>ಕರ್ನಾಟಕ ವೃತ್ತಿ ಕೌಶಲ್ಯ ಅಭಿವೃದ್ಧಿ ನಿಗಮ. |
| 2. | ಅಪರ ನಿರ್ದೇಶಕರು(ವಿಶ್ವ)<br>ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ. |
| 3. | ಜಂಟಿ ನಿರ್ದೇಶಕರು,<br>ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ |

The criteria fixed for assessing the capacity of the NGOs

(1) The NGOs shall have conducted Udoyaga Mela
(2) It shall have qualified staff for imparting training for Physically Challenged Persons
(3) The NGO's shall have assisted the trainee's placement.
(4) The NGO's shall have good contacts with good Employment Providing Agencies/Companies (BPOs)

ತನಿಖಾ ತಂಡವು ದಿ:7.2.2013 ರಂದು ಸಲ್ಲಿಸಿದ ತನಿಖಾ ವರದಿಯನ್ನು ದಿ:8.2.2013ರಂದು ನಡೆದ ಆಯ್ಕೆ ಸಮಿತಿ ಸಭೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ:ಮಮಇ 14 ಪಿಹೆಚ್‌ಪಿ 2012 ದಿ:27.1.2013ರ

-249-



ಬೆಂಗಳೂರಿನಲ್ಲಿ ವಿಕಲಚೇತನರಿಗೆ ಉದ್ಯೋಗಕೋಶ ಪ್ರಾರಂಭಿಸಲು ಹೊರಡಿಸಿರುವ ಆಡಳಿತಾತ್ಮಕ ಮಂಜೂರಾತಿ ಆದೇಶದನ್ವಯ ಪರಿಶೀಲಿಸಿ, 3 ಅರ್ಹ ಸ್ವಯಂಸೇವಾ ಸಂಸ್ಥೆಗಳ ಸೂಕ್ತತೆಯನ್ನು ಆಯ್ಕೆ ಸಮಿತಿಯು ನಿಗದಿ ಪಡಿಸಿರುವ ಮಾನದಂಡಗಳಿಗೆ ನೀಡಿರುವ ಆಯ್ಕೆಗೊಂಡ ಸ್ವಯಂಸೇವಾ ಸಂಸ್ಥೆಗಳು ಪಡೆದಿರುವ ಗರಿಷ್ಠ ಅಂಕಗಳು ಈ ಕೆಳಗಿನಂತಿರುತ್ತದೆ.

| Sl. No. | Institutions /NGO/address | Total marks awarded |
|---|---|---|
| 1 | M/s. Samarthanam Trust for the Disabled, No.11, Villa Suchita, A Main Road, 1st Main Road, J.P.Nagar, 2nd Stage Bangalore-78. | 63 |
| 2 | M/s. Enable India, No.12, KHB Colony, Koramangala 8th Block, Bangalore-95 | 66 |
| 3 | M/s. Sri Jagdguru Thotadarya Vidyapita, Chikkabanavara, Bangalore North Taluk, Bangalore Urban District. | 37 |

3 ಅರ್ಹ ಸ್ವಯಂಸೇವಾ ಸಂಸ್ಥೆಗಳ ಸೂಕ್ತತೆಯನ್ನು ಪರಿಶೀಲಿಸಿ ಆಯ್ಕೆ ಸಮಿತಿಯು ಅಂತಿಮವಾಗಿ M/s.Enable India, No.12, KHB Colony, Koramangala 8th Block, Bangalore-95 ಈ ಸಂಸ್ಥೆಯ ಹೆಸರನ್ನು ಅಂತಿಮಗೊಳಿಸಿ ಈ ಸ್ವಯಂಸೇವಾ ಸಂಸ್ಥೆಯ ಮುಖಾಂತರ ವಿಕಲಚೇತನರಿಗಾಗಿ ಉದ್ಯೋಗ ಕೋಶ ಪ್ರಾರಂಭಿಸಲು ನಿರ್ಣಯಿಸಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ, ಈಗಾಗಲೇ ಮಾನದಂಡ ಮತ್ತು ಷರತ್ತುಗಳನ್ನು ಅಳವಡಿಸಿ ಆಡಳಿತಾತ್ಮಕ ಮಂಜೂರಾತಿ ಆದೇಶವನ್ನು ಹೊರಡಿಸಿರುವುದರಿಂದ, ಸದರಿ ಮಾನದಂಡ ಮತ್ತು ಷರತ್ತುಗಳನ್ನು ಅಳವಡಿಸಿಕೊಂಡು ಈ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಉದ್ದೇಶಿಸಿದ್ದು, ಈ ಯೋಜನೆಯ ಅನುಷ್ಠಾನದಿಂದ ಅಂಗವಿಕಲರು ಒಂದೇ ಸೂರಿನಡಿ ತರಬೇತಿ ಮತ್ತು ಉದ್ಯೋಗ ಹೊಂದಲು ಅನುಕೂಲವಾಗುವುದನ್ನು ಸರ್ಕಾರವು ಮನಗಂಡು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಮಮಇ 14 ಪಿಹೆಚ್‌ಪಿ 2012**

**ಬೆಂಗಳೂರು, ದಿನಾಂಕ: 20.03.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖಾ ವತಿಯಿಂದ ಬೆಂಗಳೂರಿನಲ್ಲಿ ವಿಕಲಚೇತನರಿಗಾಗಿ ಉದ್ಯೋಗ ಕೋಶವನ್ನು M/s.Enable India, No.12, KHB Colony, Koramangala 8th Block, Bangalore-95 ಸ್ವಯಂಸೇವಾ ಸಂಸ್ಥೆಯ ಮುಖಾಂತರ ಪ್ರಾರಂಭಿಸಲು ಸರ್ಕಾರವು ಈ ಕೆಳಕಂಡ ಷರತ್ತಿಗೊಳಪಟ್ಟು ಮಂಜೂರಾತಿ ನೀಡಿದೆ.

**ಷರತ್ತುಗಳು**

1. ಈ ಯೋಜನೆಯ ಅನುಷ್ಠಾನವನ್ನು ಸರ್ಕಾರಿ ಆದೇಶ ಸಂಖ್ಯೆ:ಮಮಇ 14 ಪಿಹೆಚ್‌ಪಿ 12

ದಿನಾಂಕ:15.6.2012 ರ ಆದೇಶದ ಅನುಬಂಧ-1 ಮತ್ತು ಅನುಬಂಧ-2ರಲ್ಲಿ ಅನುಸರಿಸಬೇಕಾದ ಮಾರ್ಗಸೂಚಿ ಮತ್ತು ಷರತ್ತುಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.

2. ಸಂಸ್ಥೆಯ ಕಾರ್ಯಕ್ಷಮತೆಯನ್ನು ಆಧರಿಸಿ ಪ್ರತಿವರ್ಷ ಯೋಜನೆಯನ್ನು ಮುಂದುವರೆಸುವ ಬಗ್ಗೆ ನವೀಕರಣ ಪಡೆಯುವ ಷರತ್ತಿಗೊಳಪಟ್ಟಿದೆ.

3. ಈ ಯೋಜನಾ ಕಾರ್ಯಕ್ರಮದ ಅನುಷ್ಠಾನಕ್ಕೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ:2235-02-101-0-55 ಯೋಜನೆ ಉಪ ಲೆಕ್ಕಶೀರ್ಷಿಕೆ 059 ಇತರೆ ಖರ್ಚುಗಳಡಿ ಒದಗಿಸಿರುವ ರೂ.86.00 ಲಕ್ಷಗಳ ಆಯವ್ಯಯದಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಬಿ.ಕಮಲಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ-2
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲಚೇತನರ ಮತ್ತು ಹಿರಿಯ ನಾಗರಿಕರ
ಸಬಲೀಕರಣ ಇಲಾಖೆ.

ಗೆ:

ಸಂಕಲನಕಾರರು, ಕರ್ನಾಟಕ ರಾಜ್ಯಪತ್ರ, ಬೆಂಗಳೂರು - ಇವರಿಗೆ ಮುಂದಿನ ವಿಶೇಷ ಸಂಚಿಕೆಯಲ್ಲಿ ಪ್ರಕಟಿಸಲು ಹಾಗೂ 100 ಪ್ರತಿಗಳನ್ನು ಈ ಇಲಾಖೆಗೆ ಒದಗಿಸುವಂತೆ ಕೋರಲಾಗಿದೆ.

ಪ್ರತಿಯನ್ನು:-

1.ಮಹಾಲೇಖಪಾಲರು , ಕರ್ನಾಟಕ, ಬೆಂಗಳೂರು.
2.ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ, ವಿಧಾನಸೌಧ, ಬೆಂಗಳೂರು.
3.ಸರ್ಕಾರದ ಪ್ರಧಾನ ಕಾರ್ಯದರ್ಶಿ, ಯೋಜನಾ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು.
4.ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಪೋಡಿಯಂ ಬ್ಲಾಕ್, ಸರ್.ಎಂ.ವಿಶ್ವೇಶ್ವರಯ್ಯ ಗೋಪುರ, ಬೆಂಗಳೂರು.
5.ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನಸೌಧ.
6.ಸಂಬಂಧಪಟ್ಟ ಎಲ್ಲ ಸ್ವಯಂ ಸೇವಾ ಸಂಸ್ಥೆಗಳಿಗೆ (ನಿರ್ದೇಶಕರ ಮುಖಾಂತರ).
7.ಸರ್ಕಾರದ ಪ್ರಧಾನ ಕಾರ್ಯದರ್ಶಿ/ಜಂಟಿ ಕಾರ್ಯದರ್ಶಿ ಇವರ ಆಪ್ತ ಕಾರ್ಯದರ್ಶಿ/ಆಪ್ತ ಸಹಾಯಕರು, ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ.
8.ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿಗಳು.

# ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಎಸ್.ಎಸ್.ಎಲ್.ಸಿ. ನಂತರದ ವಿದ್ಯಾರ್ಹತೆ ಹೊಂದಿರುವ ನಿರುದ್ಯೋಗಿ ವಿಕಲಚೇತನರಿಗೆ ನಿರುದ್ಯೋಗ ಭತ್ಯೆಯನ್ನು ನೀಡುವ ಬಗ್ಗೆ.

ಓದಲಾಗಿದೆ: ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಇವರ ಪತ್ರ ಸಂಖ್ಯೆ: ವಿಹಿನಾಸಇ/ಯೋ.ಶಾ/ಹೊಸ ಯೋಜನೆ/ಭತ್ಯೆ/20/2014-15/1350, ದಿನಾಂಕ: 4.7.2014.

ಪ್ರಸ್ತಾವನೆ:

ಎಸ್.ಎಸ್.ಎಲ್.ಸಿ. ನಂತರದ ವಿದ್ಯಾರ್ಹತೆ ಹೊಂದಿರುವ ಸುಮಾರು ಐದು ಸಾವಿರ ನಿರುದ್ಯೋಗಿ ವಿಕಲಚೇತನರಿಗೆ ಪ್ರತಿ ತಿಂಗಳು ಒಂದು ಸಾವಿರ ರೂಪಾಯಿಗಳಂತೆ ನಿರುದ್ಯೋಗ ಭತ್ಯೆ ನೀಡಲು ರೂ.16.00ಕೋಟಿಗಳನ್ನು ಒದಗಿಸಲಾಗುವುದೆಂದು ಮಾನ್ಯ ಮುಖ್ಯಮಂತ್ರಿಯವರು 2014-15ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿರುತ್ತಾರೆ.

ರಾಜ್ಯದ ವಿವಿಧ ಜಿಲ್ಲೆಗಳ ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ನೋಂದಾಯಿಸಿರುವ 20ರಿಂದ 45ರ ವಯೋಮಾನದ ಒಟ್ಟು 10482 ನಿರುದ್ಯೋಗಿ ವಿಕಲಚೇತನರಿದ್ದು, ಎಸ್.ಎಸ್.ಎಲ್.ಸಿ. ವ್ಯಾಸಂಗ ಮಾಡಿದವರಿಗೆ ರೂ.300/-ರಂತೆ, ಪಿ.ಯು.ಸಿ. ಹಾಗೂ ತತ್ಸಮಾನ ಹೊಂದಿದವರಿಗೆ ರೂ.400/-ರಂತೆ ಹಾಗೂ ಪದವಿ ಮತ್ತು ತತ್ಸಮಾನ ನಂತರ ವಿದ್ಯಾರ್ಹತೆ ಹೊಂದಿದವರಿಗೆ ರೂ.500/-ರಂತೆ ನಿರುದ್ಯೋಗ ಭತ್ಯೆಯನ್ನು ನೀಡಬಹುದಾಗಿದ್ದು, 2014-15ನೇ ಸಾಲಿನ ಅಂಗವಿಕಲರ ಉದ್ಯೋಗ ಕೋಶ ಯೋಜನೆಯ ಲೆಕ್ಕಶೀರ್ಷಿಕೆ 2235-02-101-0-55 ಯೋಜನೆ ಉಪ ಲೆಕ್ಕಶೀರ್ಷಿಕೆ 059 ಇತರ ವೆಚ್ಚಗಳಡಿಯಲ್ಲಿ ನಿರುದ್ಯೋಗ ಭತ್ಯೆ ನೀಡಲು ಒದಗಿಸಿರುವ ರೂ.216.00 ಲಕ್ಷಗಳ ಅನುದಾನದಲ್ಲಿ ಅನುಷ್ಠಾನಗೊಳಿಸಬಹುದಾಗಿದೆಂದು ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯವರು ಮೇಲೆ ಓದಲಾದ ದಿನಾಂಕ:4.7.2014ರ ಪತ್ರದಲ್ಲಿ ಪ್ರಸ್ತಾಪಿಸಿರುತ್ತಾರೆ ಹಾಗೂ ಈ ಯೋಜನೆಯನ್ನು ಸಾಮಾಜಿಕ ಭದ್ರತೆ ಮತ್ತು ಪಿಂಚಣಿ ನಿರ್ದೇಶನಾಲಯದ ಮೂಲಕ ಅನುಷ್ಠಾನಗೊಳಿಸಲು ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 112 ಪಿಎಚ್‌ಪಿ 2014, ಬೆಂಗಳೂರು,**
**ದಿನಾಂಕ: 28.10.2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಎಸ್.ಎಸ್.ಎಲ್.ಸಿ ನಂತರದ ವಿದ್ಯಾರ್ಹತೆ ಹೊಂದಿರುವ ನಿರುದ್ಯೋಗಿ ವಿಕಲಚೇತನರಿಗೆ ಪ್ರತಿ ತಿಂಗಳು ರೂ.500/- ಗಳಂತೆ ನಿರುದ್ಯೋಗಿ ಭತ್ಯೆಯನ್ನು ನೀಡಲು ಸರ್ಕಾರವು ಈ ಮೂಲಕ ಮಂಜೂರಾತಿ ನೀಡಿದೆ.

ಈ ಯೋಜನೆಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ:2235-02-101-0-55-059(ಯೋಜನೆ) ಯಡಿಯಲ್ಲಿ ಒದಗಿಸಿರುವ ಅನುದಾನದಲ್ಲಿ ಭರಿಸತಕ್ಕದ್ದು.

ಈ ಯೋಜನೆಯನ್ನು ಸಾಮಾಜಿಕ ಭದ್ರತೆ ಮತ್ತು ಪಿಂಚಣಿ ನಿರ್ದೇಶನಾಲಯದ ಮೂಲಕ ಅನುಷ್ಠಾನಗೊಳಿಸತಕ್ಕದ್ದು.

30/10/14

ಈ ನಿರುದ್ಯೋಗ ಭತ್ಯೆ ಯೋಜನೆಯನ್ನು ಈ ಆದೇಶಕ್ಕೆ ಲಗತ್ತಿಸಿರುವ ಮಾರ್ಗಸೂಚಿಗಳ ಪ್ರಕಾರ ಅನುಷ್ಠಾನಗೊಳಿಸುವುದು.

ಈ ಆದೇಶವನ್ನು ಕ್ರಮವಾಗಿ ಆರ್ಥಿಕ ಇಲಾಖೆ, ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 614 ವೆಚ್ಚ-3/2014, ದಿನಾಂಕ: 06.8.2014 ಹಾಗೂ ಪಿಡಿ 45 ಐಎಂಎಂ 2014, ದಿನಾಂಕ: 03.9.2014 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಲಲಿತ)
ಸರ್ಕಾರದ ಅಧೀನ ಕಾರ್ಯದರ್ಶಿ-2
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ,
ಹಾಗೂ ವಿಕಲಚೇತನರ ಮತ್ತು ಹಿರಿಯ
ನಾಗರಿಕರ ಸಬಲೀಕರಣ ಇಲಾಖೆ

ಇವರಿಗೆ:-

1. ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು.
2. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು.
3. ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಬೆಂಗಳೂರು.
4. ಮಾನ್ಯ ಮುಖ್ಯ ಮಂತ್ರಿಯವರ ಆಪ್ತ ಕಾರ್ಯದರ್ಶಿಗಳು, ವಿಧಾನಸೌಧ, ಬೆಂಗಳೂರು.
5. ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನಸೌಧ, ಬೆಂಗಳೂರು.
6. ನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ಬೆಂಗಳೂರು.
7. ಆಂತರಿಕ ಆರ್ಥಿಕ ಸಲಹೆಗಾರರು,ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು.
8. ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವೆಚ್ಚ - 3 & 9).
9. ನಿರ್ದೇಶಕರು, ಯೋಜನಾ ಇಲಾಖೆ (ಪಿ.ಎಂ.ಐ. ವಿಭಾಗ).
10. ಎಲ್ಲಾ ಜಿಲ್ಲೆಯ ಉಪ ನಿರ್ದೇಶಕರು/ ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ (ನಿರ್ದೇಶಕರ ಮುಖಾಂತರ).
11. ಎಲ್ಲಾ ಜಿಲ್ಲೆಯ ಅಂಗವಿಕಲರ ಕಲ್ಯಾಣಾಧಿಕಾರಿಗಳು, ಉಪ ನಿರ್ದೇಶಕರ ಕಛೇರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ (ನಿರ್ದೇಶಕರ ಮುಖಾಂತರ).
12. ಶಾಖಾ ರಕ್ಷಾ ಕಡತ/ ಹೆಚ್ಚುವರಿ ಪ್ರತಿ.

ಸರ್ಕಾರದ ಆದೇಶ ಸಂಖ್ಯೆ: ಮಮಇ 112 ಪಿಎಚ್‌ಪಿ 2014, ದಿನಾಂಕ: 28.10.2014 ರಂತೆ ನಿರುದ್ಯೋಗಿ ವಿಕಲಚೇತನರಿಗೆ ನಿರುದ್ಯೋಗ ಭತ್ಯೆ ನೀಡುವ ಸಂಬಂಧ

ಅನುಸರಿಸಬೇಕಾದ ಮಾರ್ಗಸೂಚಿಗಳು

1. ಸದರಿ ಯೋಜನೆ ಅಡಿಯಲ್ಲಿ ಆಯ್ಕೆಯಾಗಿರುವ ಅಭ್ಯರ್ಥಿಗಳು ಸರ್ಕಾರದ ಇತರೆ ಯಾವುದೇ ಯೋಜನೆಯ ಅಡಿಯಲ್ಲಿ ಸೌಲಭ್ಯವನ್ನು ಪಡೆಯುತ್ತಿಲ್ಲವೆಂಬುದನ್ನು ದೃಢಪಡಿಸಿಕೊಳ್ಳುವುದು.
2. ಶೇ.40 ಹಾಗೂ ಅದಕ್ಕಿಂತ ಹೆಚ್ಚಿನ ಅಂಗವಿಕಲತೆ ಹೊಂದಿರುವ ಎಲ್ಲಾ ವಿಕಲಚೇತನರು ಮಾತ್ರ ಸದರಿ ಸೌಲಭ್ಯ ಪಡೆಯಲು ಅರ್ಹರಿರುತ್ತಾರೆ
3. ನಿರುದ್ಯೋಗ ಭತ್ಯೆ ಪಡೆಯಲು 25ರಿಂದ 45ರ ವಯೋಮಿತಿಯೊಳಗಿರತಕ್ಕದ್ದು.
4. ವಿಕಲಚೇತನ ವ್ಯಕ್ತಿಗಳು ಭಾರತ ಪ್ರಜೆಯಾಗಿರಬೇಕು. ಹಾಗೂ ಇವರು ಕರ್ನಾಟಕದಲ್ಲಿ ಕನಿಷ್ಠ ಹಿಂದಿನ 10 ವರ್ಷಗಳು ವಾಸವಾಗಿರಬೇಕು.
5. ವಿಕಲಚೇತನರು 2 ವರ್ಷಗಳಿಗೂ ಹೆಚ್ಚಿನ ಅವಧಿಯಿಂದ ವಿಶೇಷ ಉದ್ಯೋಗ ವಿನಿಮಯ ಕೇಂದ್ರ/ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ಹೆಸರನ್ನು ನೋಂದಾಯಿಸಿಕೊಂಡಿದ್ದು, ನಿರುದ್ಯೋಗಿಯಾಗಿರತಕ್ಕದ್ದು.
6. ವಿಕಲಚೇತನ ವ್ಯಕ್ತಿಗಳು ಯಾವುದೇ ಲಾಭದಾಯಕ ಉದ್ಯೋಗದಲ್ಲಿರತಕ್ಕದ್ದಲ್ಲ.
7. ಸಾಮಾಜಿಕ ಭದ್ರತೆ ಯೋಜನೆಯಡಿ ಮಾಸಿಕ ಪೋಷಣಾ ಭತ್ಯೆ ಪಡೆಯುತ್ತಿರುವ ವಿಕಲಚೇತನರು ಈ ಸೌಲಭ್ಯಕ್ಕೆ ಅರ್ಹರಿರುವುದಿಲ್ಲ.
8. ಈ ಸೌಲಭ್ಯ ಪಡೆಯಲು ಯಾವುದೇ ಆದಾಯಮಿತಿ ಇರುವುದಿಲ್ಲ.
9. ಈ ಯೋಜನೆ ಸೌಲಭ್ಯ ಪಡೆಯಲು ಅರ್ಜಿದಾರರು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಬೇಕಾಗಿರುತ್ತದೆ.
10. ಸದರಿ ಯೋಜನೆಯನ್ನು ಸಾಮಾಜಿಕ ಭದ್ರತೆ ಹಾಗೂ ಪಿಂಚಣಿ ನಿರ್ದೇಶನಾಲಯದ ಮೂಲಕ (ಕಂದಾಯ ಇಲಾಖೆ) ಅನುಷ್ಠಾನಗೊಳಿಸಬೇಕಾಗಿದ್ದು, ಆಯಾ ತಾಲ್ಲೂಕಿನ ತಹಸೀಲ್ದಾರರು ಮಂಜೂರಾತಿ ನೀಡಬೇಕಾಗಿರುತ್ತದೆ.
11. ನಿರುದ್ಯೋಗ ಭತ್ಯೆ ಸೌಲಭ್ಯ ಪಡೆಯುವ ಫಲಾನುಭವಿಗಳು ವಿದ್ಯಾರ್ಹತೆ ಹೊಂದಿರುವ ಅಂಕ ಪಟ್ಟಿಗಳ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.
12. ಯಾವುದೇ ಉದ್ಯೋಗ (ಸ್ವಉದ್ಯೋಗ ಒಳಗೊಂಡಂತೆ) ದೊರೆಯದೇ ಇರುವ ಪತ್ರದ ದೃಢೀಕರಣವನ್ನು ಸ್ಥಳೀಯ ಪತ್ರಾಂಕಿತ ಅಧಿಕಾರಿಗಳಿಂದ ಪಡೆದು ಸಲ್ಲಿಸತಕ್ಕದ್ದು.
13. ವಿದ್ಯಾರ್ಥಿವೇತನ /ಶಿಕ್ಷಣ ಶುಲ್ಕ ಮರುಪಾವತಿ ಯೋಜನೆಯಡಿಯಲ್ಲಿ ಉಪಯೋಗ ಪಡೆಯುತ್ತಿರುವ ಅಭ್ಯರ್ಥಿಗಳು ಈ ಯೋಜನೆಗೆ ಒಳಪಡಲು ಅರ್ಹರಿರುವುದಿಲ್ಲ.
14. ಸುಳ್ಳು ಮಾಹಿತಿ/ ದಾಖಲೆ ನೀಡಿ ಸೌಲಭ್ಯ ಪಡೆಯುವ ಹಾಗೂ ಉದ್ಯೋಗ (ಸ್ವ ಉದ್ಯೋಗ ಒಳಗೊಂಡಂತೆ) ದೊರಕಿದ ನಂತರವೂ ಲಿಖಿತ ಮಾಹಿತಿ ನೀಡದೇ ಉದ್ಯೋಗ ಭತ್ಯೆ ಪಡೆಯುವುದು ಕ್ರಿಮಿನಲ್ ಅಪರಾಧವಾಗಿದ್ದು ಅಂತಹವರ ವಿರುದ್ಧ ಕ್ರಿಮಿನಲ್ ಕ್ರಮ ವಹಿಸುವುದಲ್ಲದೆ ದುರುಪಯೋಗ ಪಡಿಸಿಕೊಂಡ ಹಣವನ್ನು ವಾರ್ಷಿಕ ಶೇಕಡ 18% ಬಡ್ಡಿಯೊಂದಿಗೆ ವಸೂಲಿ ಮಾಡಲು ಕ್ರಮ ವಹಿಸಲಾಗುವುದು.
15. ಉದ್ಯೋಗ ದೊರಕಿದ ಕೂಡಲೇ ಈ ಯೋಜನೆಯಡಿ ಪ್ರಯೋಜನ ಪಡೆಯಲು ಅವಕಾಶವಿರುವುದಿಲ್ಲ ಹಾಗೂ ಲಿಖಿತವಾಗಿ ಮಂಜೂರಾತಿ ಪ್ರಾಧಿಕಾರ ಹಾಗೂ ಉದ್ಯೋಗ ವಿನಿಮಯ ಕೇಂದ್ರಕ್ಕೆ ತಿಳಿಸತಕ್ಕದ್ದು.
16. ಉದ್ಯೋಗ ದೊರತ ನಂತರ ಕರ್ತವ್ಯಕ್ಕೆ ಹಾಜರಾಗುವ ಮುನ್ನ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳಿಂದ ಈ ಯೋಜನೆಯಿಂದ ಪ್ರಯೋಜನ ಪಡೆಯುತ್ತಿಲ್ಲವೆಂಬ ಬಗ್ಗೆ ದೃಢೀಕರಣ ಸಲ್ಲಿಸಬೇಕಾಗುತ್ತದೆ.

(ಲಲಿತ)

ಸರ್ಕಾರದ ಅಧೀನ ಕಾರ್ಯದರ್ಶಿ-2

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

ಹಾಗೂ ವಿಕಲಚೇತನರ ಮತ್ತು ಹಿರಿಯ

ನಾಗರಿಕರ ಸಬಲೀಕರಣ ಇಲಾಖೆ

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಎಸ್.ಎಸ್.ಎಲ್.ಸಿ. ಹಾಗೂ ನಂತರದ ವಿದ್ಯಾರ್ಹತೆ ಹೊಂದಿರುವ ನಿರುದ್ಯೋಗಿ ವಿಕಲಚೇತನರಿಗೆ ನಿರುದ್ಯೋಗ ಭತ್ಯೆ ಯೋಜನೆ ಪರಿಷ್ಕರಣೆ ಬಗ್ಗೆ.

ಓದಲಾಗಿದೆ:

1) ಸರ್ಕಾರದ ಆದೇಶ ಸಂಖ್ಯೆ: ಮಮಇ 112 ಪಿಹೆಚ್‌ಪಿ 2014, ದಿನಾಂಕ: 12.03.2015
2) ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1024 ವೆಚ್ಚ-3/ 2015, ದಿನಾಂಕ:24.11.2015.
3) ಕಂದಾಯ ಇಲಾಖೆ (ನಿರ್ದೇಶಕರು, ಸಾಮಾಜಿಕ ಭದ್ರತೆ ಮತ್ತು ಪಿಂಚಣಿ ನಿರ್ದೇಶನಾಲಯ)ಯ ಟಿಪ್ಪಣಿ ಸಂಖ್ಯೆ: ಆರ್‌ಡಿ 145 ಡಿಎಸ್‌ಪಿ 2015, ದಿನಾಂಕ:11.02.2016.
4) ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ:ಪಿಡಿ 04 ಐಎಂಎಂ 2016,ದಿನಾಂಕ:29-01-2016.



ಪ್ರಸ್ತಾವನೆ:

ಎಸ್.ಎಸ್.ಎಲ್.ಸಿ. ಹಾಗೂ ನಂತರದ ವಿದ್ಯಾರ್ಹತೆ ಹೊಂದಿರುವ ಸುಮಾರು ಐದು ಸಾವಿರ ನಿರುದ್ಯೋಗಿ ವಿಕಲಚೇತನರಿಗೆ ಪ್ರತಿ ತಿಂಗಳು ರೂ.1000/-ದಂತೆ ನಿರುದ್ಯೋಗ ಭತ್ಯೆಯನ್ನು ನೀಡಲು ರೂ.2.16ಕೋಟಿ ಒದಗಿಸಲಾಗುವುದೆಂದು ಮಾನ್ಯ ಮುಖ್ಯಮಂತ್ರಿಯವರು 2014-15ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿರುತ್ತಾರೆ.

ಎಸ್.ಎಸ್.ಎಲ್.ಸಿ. ಹಾಗೂ ನಂತರದ ವಿದ್ಯಾರ್ಹತೆ ಹೊಂದಿರುವ ನಿರುದ್ಯೋಗಿ ವಿಕಲಚೇತನರಿಗೆ ಪ್ರತಿ ತಿಂಗಳು ರೂ.500/- ರಿಂದ ರೂ.1000/-ಕ್ಕೆ ಹೆಚ್ಚಿಸಿ ಹಾಗೂ ಸದರಿ ಯೋಜನೆಯನ್ನು ಸಾಮಾಜಿಕ ಭದ್ರತೆ ಮತ್ತು ಪಿಂಚಣಿ ನಿರ್ದೇಶನಾಲಯದ ಮೂಲಕ ಅನುಷ್ಠಾನಗೊಳಿಸಲು ಮೇಲೆ ಕ್ರಮ ಸಂಖ್ಯೆ(1)ರ ಓದಲಾದ ದಿನಾಂಕ:12.03.2015ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿ ನೀಡಲಾಗಿದೆ.

ಈ ಯೋಜನೆಯನ್ನು ಅನುಷ್ಠಾನಗೊಳಿಸುವ ಹಿನ್ನೆಲೆಯಲ್ಲಿ ಸದರಿ ಯೋಜನೆಗೆ ಬಿಡುಗಡೆಯಾಗಿರುವ ಆಯವ್ಯಯವನ್ನು ಸಾಮಾಜಿಕ ಭದ್ರತೆ ಮತ್ತು ಪಿಂಚಣಿ ನಿರ್ದೇಶನಾಲಯದ ಲೆಕ್ಕ ಶೀರ್ಷಿಕೆಗೆ ವರ್ಗಾಯಿಸುವಂತೆ ಕೋರಿ ಆರ್ಥಿಕ ಇಲಾಖೆಯನ್ನು ಕೋರಲಾಗಿತ್ತು. ಸದರಿ ಇಲಾಖೆಯು ಈ ಬಗ್ಗೆ ಕಂದಾಯ ಇಲಾಖೆಯಿಂದ ಸಹಮತಿ ಹಾಗೂ ಯೋಜನಾ ಇಲಾಖೆಯಿಂದ ಅನುಮೋದನೆಯನ್ನು ಪಡೆದಿರುವ ಬಗ್ಗೆ ವಿವರವನ್ನು ನೀಡಲು ಮೇಲೆ ಓದಲಾದ ಕ್ರಮ ಸಂಖ್ಯೆ(2)ರ ಆರ್ಥಿಕ ಇಲಾಖೆಯ ಟಿಪ್ಪಣಿ ದಿನಾಂಕ:24.11.2015ರಲ್ಲಿ ತಿಳಿಸಲಾಗಿದೆ.

ಆರ್ಥಿಕ ಇಲಾಖೆಯ ಅಭಿಪ್ರಾಯದಂತೆ ಕಂದಾಯ ಸಚಿವಾಲಯವನ್ನು ಸದರಿ ಯೋಜನೆಯ ಅನುಷ್ಠಾನದ ಸಹಮತಿಯ ಬಗ್ಗೆ ಕೋರಲಾಗಿ, ಕಂದಾಯ ಇಲಾಖೆಯು (ಸಾಮಾಜಿಕ ಭದ್ರತೆ ಮತ್ತು ಪಿಂಚಣಿ ನಿರ್ದೇಶನಾಲಯವು) ನೀಡಿರುವ ಅಭಿಪ್ರಾಯದಲ್ಲಿ "ಕಂದಾಯ ಇಲಾಖೆಯು ಬಡತನ ರೇಖೆಗಿಂತ ಕೆಳಗಿರುವ ಅಸಹಾಯಕ ವ್ಯಕ್ತಿಗಳಿಗೆ ಜೀವನ ನಿರ್ವಹಣೆಗೆ ಸಂಬಂಧಿಸಿದಂತೆ, ಪಿಂಚಣಿ ಯೋಜನೆಗಳನ್ನು ಮಾತ್ರ ಅನುಷ್ಠಾನಗೊಳಿಸುತ್ತಿದೆ.

....2

ಎಸ್.ಎಸ್.ಎಲ್.ಸಿ. ಹಾಗೂ ನಂತರದ ವಿದ್ಯಾರ್ಹತೆ ಹೊಂದಿರುವ ನಿರುದ್ಯೋಗಿ ವಿಕಲಚೇತನರಿಗೆ ನೀಡಲಾಗುವ ನಿರುದ್ಯೋಗ ಭತ್ಯೆ ನೀಡುವ ವಿಷಯ ಸಾಮಾಜಿಕ ಭದ್ರತೆ ಮತ್ತು ಪಿಂಚಣಿಯ ವ್ಯಾಪ್ತಿಗೆ ಒಳಪಡುವುದಿಲ್ಲವೆಂದು ಸದರಿ ಇಲಾಖೆಯಿಂದ ಬಡತನ ರೇಖೆಗಿಂತ ಕೆಳಗಿರುವ ಅರ್ಹ ವಿಕಲಚೇತನರಿಗೆ ಮಾಸಾಶನ ಮಾತ್ರ ವಿತರಿಸಲಾಗುತ್ತಿದ್ದು, ವಿಕಲಚೇತನರಿಗೆ ಸರ್ಕಾರದಿಂದ ನೀಡಲಾಗುತ್ತಿರುವ ಇತರೆ ಎಲ್ಲಾ ಸೌಲಭ್ಯಗಳನ್ನು ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯ ಮೂಲಕವೇ ವಿತರಿಸಲಾಗುತ್ತಿರುವ ಕಾರಣ ಹಾಗೂ ನಿರುದ್ಯೋಗಿ ವಿಕಲಚೇತನರಿಗೆ ನಿರುದ್ಯೋಗ ಭತ್ಯೆ ನೀಡಲು 2015-16ನೇ ಸಾಲಿನ ಆಯವ್ಯಯದಲ್ಲಿ ರೂ.2.16ಕೋಟಿ ಅನುದಾನವನ್ನು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯ ಲೆಕ್ಕಶೀರ್ಷಿಕೆಯಡಿ ಒದಗಿಸಿರುವುದರಿಂದ ವಿಕಲಚೇತನರಿಗೆ ನಿರುದ್ಯೋಗ ಭತ್ಯೆ ನೀಡುವ ಯೋಜನೆಯನ್ನು ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯ ಮೂಲಕವೇ ಅನುಷ್ಠಾನಗೊಳಿಸುವಂತೆ" ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಟಿಪ್ಪಣಿಯಲ್ಲಿ ತಿಳಿಸಿ ಕಡತವನ್ನು ಹಿಂದಿರುಗಿಸಿರುತ್ತಾರೆ.

ಪ್ರಸ್ತುತ ನಿರುದ್ಯೋಗ ಭತ್ಯ ಯೋಜನೆಗೆ ಲೆಕ್ಕಶೀರ್ಷಿಕೆ:2235-02-101-0-55 ಯೋಜನೆ ಉಪಲೆಕ್ಕ ಶೀರ್ಷಿಕೆ: 059ರಡಿ ನಿಗದಿಗೊಳಿಸಿರುವ ರೂ.1.00 ಕೋಟಿ ಅನುದಾನವನ್ನು ಕಂದಾಯ ಇಲಾಖೆಯ ಲೆಕ್ಕಶೀರ್ಷಿಕೆ: 2235-02-101-020ಗೆ ವರ್ಗಾಯಿಸುವ ಈ ಪ್ರಸ್ತಾವನೆಯು ಆರ್ಥಿಕ ಇಲಾಖೆಯ ಸಹಮತಿಯ ಷರತ್ತಿಗೆ ಒಳಪಡಿಸಿ ಯೋಜನಾ ಇಲಾಖೆಯು ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಟಿಪ್ಪಣಿಯಲ್ಲಿ ಸಹಮತಿಸಿರುತ್ತದೆ.

ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯವು ಮೇಲೆ ತಿಳಿಸಿರುವಂತೆ ನೀಡಿರುವ ಅಭಿಪ್ರಾಯದ ಹಿನ್ನೆಲೆಯಲ್ಲಿ ದಿನಾಂಕ:19.02.2016ರಂದು ಮಾನ್ಯ ಇಲಾಖಾ ಸಚಿವರ ಅಧ್ಯಕ್ಷತೆಯಲ್ಲಿ 2015-16ನೇ ಸಾಲಿನಲ್ಲಿ ಆಯವ್ಯಯ ಭಾಷಣದಲ್ಲಿ ಘೋಷಣೆಯಾದ ಯೋಜನೆಗಳ ಅನುಷ್ಠಾನ ಕುರಿತಂತೆ ನಡೆದ ಸಭೆಯಲ್ಲಿ ಚರ್ಚಿಸಿದಂತೆ ಸದರಿ ಯೋಜನೆಯು ನಿರುದ್ಯೋಗಿ ಅಂಗವಿಕಲರ ಆರ್ಥಿಕ ಪುನರ್ವಸತಿಗಾಗಿ ಹಾಗೂ ಅಂಗವಿಕಲ ವ್ಯಕ್ತಿಗಳ ಅಧಿನಿಯಮ 1995ರ, ಪರಿಚ್ಛೇದ 68ರಲ್ಲಿ ಅಂಗವಿಕಲ ವ್ಯಕ್ತಿಗಳಿಗೆ ನಿರುದ್ಯೋಗ ಭತ್ಯೆ ಪಾವತಿ ಮಾಡುವುದಕ್ಕಾಗಿ ಯೋಜನೆ ರೂಪಿಸತಕ್ಕದ್ದು ಎಂಬುದಾಗಿ ತಿಳಿಸಿರುವ ಅನ್ವಯ ಈ ಯೋಜನೆಯ ಅನುಷ್ಠಾನವು ಅತ್ಯವಶ್ಯಕವಾಗಿರುತ್ತದೆ. ಈ ನಿಟ್ಟಿನಲ್ಲಿ ಸದರಿ ಯೋಜನೆಯನ್ನು ಅನುಷ್ಠಾನಗೊಳಿಸಲು ಸಾಮಾಜಿಕ ಭದ್ರತೆ ಮತ್ತು ಪಿಂಚಣಿ ನಿರ್ದೇಶನಾಲಯ, ಕಂದಾಯ ಇಲಾಖೆಯು ನಿರಾಕರಿಸಿರುವ ಹಿನ್ನೆಲೆಯಲ್ಲಿ ತಾಲ್ಲೂಕು ಮಟ್ಟದಲ್ಲಿ ಅಧಿಕಾರಿಗಳು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿ ಲಭ್ಯವಿರುವ ಕಾರಣ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಮುಖಾಂತರ ಅನುಷ್ಠಾನಗೊಳಿಸಲು ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಮತ್ತು ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ರವರು ಸಮ್ಮತಿಸಿದ ಹಿನ್ನೆಲೆಯಲ್ಲಿ ಈ ಯೋಜನೆಯನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಮುಖಾಂತರ ಅನುಷ್ಠಾನಗೊಳಿಸುವುದು ಸೂಕ್ತವೆಂದು ನಿರ್ಣಯಿಸಲಾಯಿತು.

...3

ಆದ್ದರಿಂದ ಸರ್ಕಾರದ ಆದೇಶ ಸಂಖ್ಯೆ: ಮಮಇ 112 ಪಿಹೆಚ್‌ಪಿ 2014, ದಿನಾಂಕ:12.03.2015ನ್ನು ಪರಿಷ್ಕರಿಸಿ ಈ ಕೆಳಕಂಡಂತೆ ಪರಿಷ್ಕೃತ ಆದೇಶವನ್ನು ಹೊರಡಿಸಲಾಗಿದೆ.

ಸರ್ಕಾರದ ಆದೇಶ ಸಂಖ್ಯೆ: ಮಮಇ 112 ಪಿಹೆಚ್‌ಪಿ 2014 (ಭಾಗ-2), ಬೆಂಗಳೂರು
ದಿನಾಂಕ:22.03.2016

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಸರ್ಕಾರದ ಆದೇಶ ಸಂಖ್ಯೆ: ಮಮಇ 112 ಪಿಹೆಚ್‌ಪಿ 2014, ದಿನಾಂಕ:12.03.2015ನ್ನು ಭಾಗಶಃ ಪರಿಷ್ಕರಿಸಿ ಎಸ್.ಎಸ್.ಎಲ್.ಸಿ. ಹಾಗೂ ನಂತರದ ವಿದ್ಯಾರ್ಹತೆ ಹೊಂದಿರುವ ನಿರುದ್ಯೋಗಿ ವಿಕಲಚೇತನರಿಗೆ ಮಾಸಿಕ ನಿರುದ್ಯೋಗ ಭತ್ಯೆ ನೀಡುವ ಯೋಜನೆಯನ್ನು ಸಾಮಾಜಿಕ ಭದ್ರತೆ ಮತ್ತು ಪಿಂಚಣಿ ನಿರ್ದೇಶನಾಲಯದ ಬದಲಿಗೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಮುಖಾಂತರ ಈ ಆದೇಶಕ್ಕೆ ಲಗತ್ತಿಸಿರುವ ಮಾರ್ಗಸೂಚಿ ಹಾಗೂ ಅನುಬಂಧ-1 ಮತ್ತು 2ರ ಪ್ರಕಾರ ಅನುಷ್ಠಾನಗೊಳಿಸಲು ಆದೇಶಿಸಿದೆ.

ಈ ಯೋಜನೆಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2235-02-101-0-55 ಯೋಜನೆಗೆ ಒದಗಿಸಿರುವ ಅನುದಾನದ ಮಿತಿಯಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ

22/3/2016
(ಜಯಲಕ್ಷ್ಮಿ)
ಸರ್ಕಾರದ ಅಧೀನ ಕಾರ್ಯದರ್ಶಿ-2,
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲಚೇತನರ ಮತ್ತು ಹಿರಿಯ ನಾಗರಿಕರ
ಸಬಲೀಕರಣ ಇಲಾಖೆ.

ಇವರಿಗೆ:

1. ಪ್ರಧಾನ ಮಹಾಲೇಖಪಾಲರು, (ಜಿ ಮತ್ತು ಎಸ್.ಎಸ್.ಎ), (ಇ ಮತ್ತು ಆರ್ ಎಸ್ ಎ) ಮತ್ತು (ಎ ಮತ್ತು ಇ), ಕರ್ನಾಟಕ, ಹೊಸ ಕಟ್ಟಡ, ಆಡಿಟ್ ಭವನ, ಅಂಚೆ ಪೆಟ್ಟಿಗೆ ಸಂಖ್ಯೆ:5398, ಬೆಂಗಳೂರು-560 001.
2. ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ ವೆಚ್ಚ(3 ಮತ್ತು 9), ವಿಧಾನ ಸೌಧ, ಬೆಂಗಳೂರು.
3. ನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ಬೆಂಗಳೂರು.
4. ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ವಿ.ವಿ.ಗೋಪುರ, ಬೆಂಗಳೂರು.
5. ಆಂತರಿಕ ಆರ್ಥಿಕ ಸಲಹೆಗಾರರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.
6. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆರವರ ಆಪ್ತ ಕಾರ್ಯದರ್ಶಿಗಳು.
7. ಸರ್ಕಾರದ ಉಪ ಕಾರ್ಯದರ್ಶಿಗಳು, ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆರವರ ಆಪ್ತ ಸಹಾಯಕರು
8. ಶಾಖಾಧಿಕಾರಿ, ಸ್ವೀಕೃತಿ ಮತ್ತು ರವಾನೆ ಶಾಖೆ, ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ.

ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಎಸ್.ಎಸ್.ಎಲ್.ಸಿ. ಹಾಗೂ ನಂತರದ ವಿದ್ಯಾರ್ಹತೆ ಹೊಂದಿರುವ ನಿರುದ್ಯೋಗಿ ವಿಕಲಚೇತನರಿಗೆ ನಿರುದ್ಯೋಗ ಭತ್ಯೆಯನ್ನು 1,000ರೂ.ಗಳಿಗೆ ಹೆಚ್ಚಿಸುವ ಬಗ್ಗೆ

ಓದಲಾಗಿದೆ: 1. ಸರ್ಕಾರದ ಆದೇಶ ಸಂಖ್ಯೆ: ಮಮಇ 112 ಪಿಹೆಚ್‌ಪಿ 2014 ದಿನಾಂಕ: 28.10.2014

2. ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ:ಇಸಿ: 20/ಯೋಜನೆ/ನಿರುದ್ಯೋಗ ಭತ್ಯೆ/2014-15 ದಿ: 03.12..2014

ಪ್ರಸ್ತಾವನೆ:

ಎಸ್.ಎಸ್.ಎಲ್.ಸಿ. ಹಾಗೂ ನಂತರದ ವಿದ್ಯಾರ್ಹತೆ ಹೊಂದಿರುವ ಸುಮಾರು ಐದು ಸಾವಿರ ನಿರುದ್ಯೋಗಿ ವಿಕಲಚೇತನರಿಗೆ ಪ್ರತಿ ತಿಂಗಳು 1,000 ರೂ.ಗಳಂತೆ ನಿರುದ್ಯೋಗ ಭತ್ಯೆಯನ್ನು ನೀಡಲು 2.16 ಕೋಟಿ ರೂ. ಒದಗಿಸಲಾಗುವುದೆಂದು ಮಾನ್ಯ ಮುಖ್ಯಮಂತ್ರಿಯವರು 2014-15ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿರುತ್ತಾರೆ.

ಎಸ್.ಎಸ್.ಎಲ್.ಸಿ. ಹಾಗೂ ನಂತರದ ವಿದ್ಯಾರ್ಹತೆ ಹೊಂದಿರುವ ನಿರುದ್ಯೋಗಿ ವಿಕಲಚೇತನರಿಗೆ ಪ್ರತಿ ತಿಂಗಳು ರೂ. 500/-ಗಳಂತೆ ನಿರುದ್ಯೋಗ ಭತ್ಯೆಯನ್ನು ನೀಡಲು ಮೇಲೆ(1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಮಂಜೂರಾತಿ ನೀಡಲಾಗಿದೆ.

ರಾಜ್ಯದಲ್ಲಿ ವಿವಿಧ ಜಿಲ್ಲೆಗಳ ಉದ್ಯೋಗ ವಿನಿಯಮ ಕೇಂದ್ರಗಳಲ್ಲಿ ನೊಂದಾಯಿಸಿರುವ 20 ರಿಂದ 45ರ ವಯೋಮಾನವದರೆಗಿನ 10482 ನಿರುದ್ಯೋಗಿ ವಿಕಲಚೇತನರ ಮಾಹಿತಿ ಲಭ್ಯವಿದ್ದು ಮಾಸಿಕ ಪೋಷಣಾ ಭತ್ಯೆ ಪಡೆಯುವ ಅವಕಾಶವಿಲ್ಲದಿರುವುದರಿಂದ ಇಂತಹ ವಿಕಲಚೇತನರು ಸುಮಾರು ಶೇಕಡ 40%ರಷ್ಟು ಇರುವುದಾಗಿ ಅಂದಾಜಿಸಿ ಇವರನ್ನು ಹೊರತುಪಡಿಸಿ, ಉಳಿದ ಸುಮಾರು 6300 ನಿರುದ್ಯೋಗಿ ವಿಕಲಚೇತನರಿಗೆ ಪ್ರತಿ ಮಾಹೆಗೆ ರೂ.1,000/-ಗಳಂತೆ ನಿರುದ್ಯೋಗ ಭತ್ಯೆಯನ್ನು ನೀಡಬೇಕಾಗಿರುತ್ತದೆ. ಈ ಯೋಜನೆಗೆ 2014-15ರ ಸಾಲಿನಲ್ಲಿ ಲೆಕ್ಕಶೀರ್ಷಿಕೆ 2235-02-101-0-55-059 ಯೋಜನೆ(ಉದ್ಯೋಗ ಕೋಶ)ಯಲ್ಲಿ ಒದಗಿಸಿರುವ ಅನುದಾನ ರೂ.290.00ಲಕ್ಷಗಳ ರೂ.2.16ಲಕ್ಷಗಳು ಹಂಚಿಕೆಯಾಗಿದ್ದು ಹೆಚ್ಚುವರಿಯಾಗಿ ರೂ. 41.00ಲಕ್ಷಗಳಲ್ಲಿ ಆಯವ್ಯಯ ಬಿಡುಗಡೆ ಮಾಡಲಾಗಿದೆ ಸರ್ಕಾರದ ಆದೇಶವನ್ನು ಹೊರಡಿಸುವಂತೆ ಮೇಲೆ ಕ್ರಸಂ.(2)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ರವರು ಕೋರಿರುತ್ತಾರೆ.

ಮೇಲಿನ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 112 ಪಿಹೆಚ್‌ಪಿ 2014, ಬೆಂಗಳೂರು, ದಿನಾಂಕ: 12/03/2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಎಸ್.ಎಸ್.ಎಲ್.ಸಿ. ಹಾಗೂ ನಂತರದ ವಿದ್ಯಾರ್ಹತೆ ಹೊಂದಿರುವ ನಿರುದ್ಯೋಗಿ ವಿಕಲಚೇತನರಿಗೆ ಮಾಸಿಕ ನಿರುದ್ಯೋಗ ಭತ್ಯೆಯನ್ನು ರೂ.500/-ರಿಂದ ರೂ.1000/-ಗಳಿಗೆ ಹೆಚ್ಚಿಸಿ ಮಂಜೂರಾತಿ ನೀಡಿದೆ.

ಈ ಯೋಜನೆಗೆ ತಗಲುವ 2014-15ನೇ ಸಾಲಿನಲ್ಲಿ ವೆಚ್ಚವನ್ನು 2235-02-101-0-55 ಯೋಜನೆ ಒದಗಿಸಿರುವ ಅನುದಾನದ ಮಿತಿಯಲ್ಲಿ ಭರಿಸತಕ್ಕದ್ದು.

ಈ ಯೋಜನೆಯನ್ನು ಸಾಮಾಜಿಕ ಭದ್ರತೆ ಮತ್ತು ಪಿಂಚಣಿ ನಿರ್ದೇಶನಾಲಯದ ಮೂಲಕ ಅನುಷ್ಠಾನಗೊಳಿಸತಕ್ಕದ್ದು.

ಈ ನಿರುದ್ಯೋಗ ಭತ್ಯೆ ಯೋಜನೆಯನ್ನು ಈ ಆದೇಶಕ್ಕೆ ಲಗತ್ತಿಸಿರುವ ಮಾರ್ಗಸೂಚಿಗಳ ಪ್ರಕಾರ ಅನುಷ್ಠಾನಗೊಳಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 183 ವೆಚ್ಚ-3/2015 ದಿನಾಂಕ:24/02/2015ರಲ್ಲಿ ನೀಡಿರುವ ಸಹಮಿತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು
ಅವರ ಹೆಸರಿನಲ್ಲಿ

(ಲಲಿತ)
ಸರ್ಕಾರದ ಅಧೀನ ಕಾರ್ಯದರ್ಶಿ-2
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲಚೇತನರ ಮತ್ತು ಹಿರಿಯ ನಾಗರಿಕರ
ಸಬಲೀಕರಣ ಇಲಾಖೆ.

ಇವರಿಗೆ:

1. 1.ಪ್ರಧಾನ ಮಹಾಲೇಖಪಾಲರು(ಜಿ& ಎಸ್ ಎಸ್ ಎ), (ಇ & ಆರ್ ಎಸ್ ಎ), ಮತ್ತು (ಎ&ಇ), ಕರ್ನಾಟಕ, ಹೊಸ ಕಟ್ಟಡ, ಆಡಿಟ್ ಭವನ", ಅಂಚೆ ಪೆಟ್ಟಿಗೆ ಸಂಖ್ಯೆ: 5398, ಬೆಂಗಳೂರು-560001.
2. ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ ವೆಚ್ಚ(3 & 9) ವಿಧಾನ ಸೌಧ, ಬೆಂಗಳೂರು
3. ನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ಬೆಂಗಳೂರು.
4. ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ವಿ.ವಿ.ಗೋಪುರ, ಬೆಂಗಳೂರು.
5. ಅಂತರಿಕ ಆರ್ಥಿಕ ಸಲಹೆಗಾರರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.
6. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರ ಆಪ್ತ ಕಾರ್ಯದರ್ಶಿ, ಬಹುಮಹಡಿ ಕಟ್ಟಡ,ಬೆಂಗಳೂರು.
7. ಸರ್ಕಾರದ ಉಪ ಕಾರ್ಯದರ್ಶಿಗಳು, ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರ ಆಪ್ತ ಸಹಾಯಕರು, ಬಹುಮಹಡಿ ಕಟ್ಟಡ, ಬೆಂಗಳೂರು.
8. ಶಾಖಾಧಿಕಾರಿ, ಸ್ವೀಕೃತಿ ಮತ್ತ ರವಾನೆ ಶಾಖೆ ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ
9. ಶಾಖಾ ರಕ್ಷಕ ಕಡತ : ಹೆಚ್ಚುವರಿ ಪ್ರತಿಗಳು.

ಸರ್ಕಾರದ ಆದೇಶ ಸಂಖ್ಯೆ:ಮಮಇ 112 ಪಿಹೆಚ್‌ಪಿ 2014, ದಿನಾಂಕ:28/02/2015ರಂತೆ
ನಿರುದ್ಯೋಗಿ ವಿಕಲಚೇತನರಿಗೆ ನಿರುದ್ಯೋಗ ಭತ್ಯೆ ನೀಡುವ ಸಂಬಂಧ ಅನುಸರಿಸಬೇಕಾದ
ಮಾರ್ಗಸೂಚಿಗಳು

1. ಸದರಿ ಯೋಜನೆ ಅಡಿಯಲ್ಲಿ ಆಯ್ಕೆಯಾಗಿರುವ ಅಭ್ಯರ್ಥಿಗಳು ಸರ್ಕಾರದ ಇತರೆ ಯಾವುದೇ ಯೋಜನೆಯ ಅಡಿಯಲ್ಲಿ ಸೌಲಭ್ಯವನ್ನು ಪಡೆಯುತ್ತಿಲ್ಲವೆಂಬುದನ್ನು ದೃಢಪಡಿಸಿಕೊಳ್ಳುವುದು.
2. ಶೇ.40ರಷ್ಟು ಹಾಗೂ ಅದಕ್ಕಿಂತ ಹೆಚ್ಚಿನ ಅಂಗವಿಕಲತೆ ಹೊಂದಿರುವ ಎಲ್ಲಾ ವಿಕಲಚೇತನರು ಮಾತ್ರ ಸದರಿ ಸೌಲಭ್ಯ ಪಡೆಯಲು ಅರ್ಹರಿರುತ್ತಾರೆ.
3. ನಿರುದ್ಯೋಗ ಭತ್ಯೆ ಪಡೆಯಲು 25 ರಿಂದ 45ರ ವಯೋಮಿತಿಯೊಳಗಿರತಕ್ಕದ್ದು.
4. ವಿಕಲಚೇತನ ವ್ಯಕ್ತಿಗಳು ಭಾರತ ಪ್ರಜೆಯಾಗಿರಬೇಕು. ಹಾಗೂ ಇವರು ಕರ್ನಾಟಕದಲ್ಲಿ ಕನಿಷ್ಠ ಹಿಂದಿನ 10 ವರ್ಷಗಳು ವಾಸವಾಗಿರಬೇಕು.
5. ವಿಕಲಚೇತನರು 2 ವರ್ಷಗಳಿಗೂ ಹೆಚ್ಚಿನ ಅವಧಿಯಿಂದ ವಿಶೇಷ ಉದ್ಯೋಗ ವಿನಿಮಯ ಕೇಂದ್ರ/ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ಹೆಸರನ್ನು ನೊಂದಾಯಿಸಿಕೊಂಡಿದ್ದು ನಿರುದ್ಯೋಗಿಯಾಗಿರತಕ್ಕದ್ದು.
6. ವಿಕಲಚೇತನ ವ್ಯಕ್ತಿಗಳು ಯಾವುದೇ ಲಾಭದಾಯಕ ಉದ್ಯೋಗದಲ್ಲಿರತಕ್ಕದ್ದಲ್ಲ.
7. ಸಾಮಾಜಿಕ ಭದ್ರತೆ ಯೋಜನೆಯಡಿ ಮಾಸಿಕ ಪೋಷಣಾ ಭತ್ಯೆ ಪಡೆಯುತ್ತಿರುವ ವಿಕಲಚೇತನರು ಈ ಸೌಲಭ್ಯಕ್ಕೆ ಅರ್ಹರಿರುವುದಿಲ್ಲ.
8. ಈ ಸೌಲಭ್ಯ ಪಡೆಯಲು ಯಾವುದೇ ಆದಾಯಮಿತಿ ಇರುವುದಿಲ್ಲ.
9. ಈ ಯೋಜನೆ ಸೌಲಭ್ಯ ಪಡೆಯಲು ಅರ್ಜಿದಾರರು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಬೇಕಾಗಿರುತ್ತದೆ.
10. ಸದರಿ ಯೋಜನೆಯನ್ನು ಸಾಮಾಜಿಕ ಭದ್ರತೆ ಹಾಗೂ ಪಿಂಚಣಿ ನಿರ್ದೇಶನಾಲಯದ ಮೂಲಕ (ಕಂದಾಯ ಇಲಾಖೆ) ಅನುಷ್ಠಾನಗೊಳಿಸಬೇಕಾಗಿದ್ದು, ಆಯಾ ತಾಲ್ಲೂಕಿ ತಹಸೀಲ್ದಾರರು ಮಂಜೂರಾತಿ ನೀಡಬೇಕಾಗಿರುತ್ತದೆ.
11. ನಿರುದ್ಯೋಗ ಭತ್ಯೆ ಸೌಲಭ್ಯ ಪಡೆಯುವ ಫಲಾನುಭವಿಗಳು ವಿದ್ಯಾರ್ಹತೆ ಹೊಂದಿರುವ ಅಂಕ ಪಟ್ಟಿಗಳ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.
12. ಯಾವುದೇ ಉದ್ಯೋಗ(ಸ್ವ ಉದ್ಯೋಗ ಒಳಗೊಂಡಂತೆ) ದೊರೆಯದೇ ಇರುವ ಪತ್ರದ ದೃಢೀಕರಣವನ್ನು ಸ್ಥಳೀಯ ಪತ್ರಾಂಕಿತ ಅಧಿಕಾರಿಗಳಿಂದ ಪಡೆದು ಸಲ್ಲಿಸತಕ್ಕದ್ದು.
13. ವಿದ್ಯಾರ್ಥಿವೇತನ/ಶಿಕ್ಷಣ ಶುಲ್ಕ ಮರುಪಾವತಿ ಯೋಜನೆಯಡಿಯಲ್ಲಿ ಉಪಯೋಗ ಪಡೆಯುತ್ತಿರುವ ಅಭ್ಯರ್ಥಿಗಳು ಈ ಯೋಜನೆಗೆ ಒಳಪಡಲು ಅರ್ಹರಿರುವುದಿಲ್ಲ.
14. ಸುಳ್ಳು ಮಾಹಿತಿ/ದಾಖಲೆ ನೀಡಿ ಸೌಲಭ್ಯ ಪಡೆಯುವ ಹಾಗೂ ಉದ್ಯೋಗ(ಸ್ವ ಉದ್ಯೋಗ ಒಳಗೊಂಡಂತೆ) ದೊರಕಿದ ನಂತರವು ಲಿಖಿತ ಮಾಹಿತಿ ನೀಡದೆ ಉದ್ಯೋಗ ಭತ್ಯೆ ಪಡೆಯುವುದು ಕ್ರಿಮಿನಲ್ ಅಪರಾಧವಾಗಿದ್ದು ಅಂತಹವರ ವಿರುದ್ಧ ಕ್ರಿಮಿನಲ್ ಕ್ರಮ ವಹಿಸುವುದಲ್ಲದೆ ದುರುಪಯೋಗ ಪಡಿಸಿಕೊಂಡ ಹಣವನ್ನು ವಾರ್ಷಿಕ ಶೇ.18% ಬಡ್ಡಿಯೊಂದಿಗೆ ವಸೂಲಿ ಮಾಡಲು ಕ್ರಮ ವಹಿಸಲಾಗುವುದು.
15. ಉದ್ಯೋಗ ದೊರಕಿದ ಕೂಡಲೇ ಈ ಯೋಜನೆಯಡಿ ಪ್ರಯೋಜನ ಪಡೆಯಲು ಅವಕಾಶವಿರುವುದಿಲ್ಲ ಹಾಗೂ ಲಿಖಿತವಾಗಿ ಮಂಜೂರಾತಿ ಪ್ರಾಧಿಕಾರ ಹಾಗೂ ಉದ್ಯೋಗ ವಿನಿಮಯ ಕೇಂದ್ರಕ್ಕೆ ತಿಳಿಸತಕ್ಕದ್ದು.
16. ಉದ್ಯೋಗ ದೊರೆತ ನಂತರ ಕರ್ತವ್ಯಕ್ಕೆ ಹಾಜರಾಗುವ ಮುನ್ನ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳಿಂದ ಈ ಯೋಜನೆಯಿಂದ ಪ್ರಯೋಜನೆ ಪಡೆಯುವಂತಿಲ್ಲವೆಂಬ ಬಗ್ಗೆ ದೃಢೀಕರಣ ಸಲ್ಲಿಸಬೇಕಾಗುತ್ತದೆ.

(ಲಲಿತ)
ಸರ್ಕಾರದ ಅಧೀನ ಕಾರ್ಯದರ್ಶಿ-2
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
[illegible]

## ಅನುಬಂಧ – 1

ಯೋಜನೆಯ ಹೆಸರು: ಎಸ್.ಎಸ್.ಎಲ್.ಸಿ.ಹಾಗೂ ನಂತರದ ವಿದ್ಯಾರ್ಹತೆ ಹೊಂದಿರುವ ನಿರುದ್ಯೋಗಿ ವಿಕಲಚೇತನರಿಗೆ ನಿರುದ್ಯೋಗ ಭತ್ಯೆ ನೀಡುವ ಯೋಜನೆ ಅನುಷ್ಠಾನ ಕುರಿತಂತೆ

ಈ ಯೋಜನೆಗೆ ನಿಗದಿಗೊಳಿಸಿದ ಆಯವ್ಯಯವನ್ನು ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆರವರಿಗೆ ಬಿಡುಗಡೆಗೊಳಿಸಲಾಗುವುದು. ಈ ಯೋಜನೆಯನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಡಿಯಲ್ಲಿ ತಾಲ್ಲೂಕು ಮಟ್ಟದಲ್ಲಿ ಕಾರ್ಯನಿರ್ವಹಿಸುತ್ತಿರುವ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಮುಖಾಂತರ ಅನುಷ್ಠಾನಗೊಳಿಸುವುದು. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯವರು ಎಲ್ಲಾ ತಾಲ್ಲೂಕಿನ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳಿಗೆ ಈ ಯೋಜನೆಯಡಿ ಗುರಿ ನಿಗದಿಪಡಿಸಿ ಆಯವ್ಯಯವನ್ನು ನಿಯಮಾನುಸಾರ ಬಿಡುಗಡೆಗೊಳಿಸುವುದು.

ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ತಮ್ಮ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ನಿರುದ್ಯೋಗಿ ಅಂಗವಿಕಲರಿಂದ ಅರ್ಜಿಗಳನ್ನು ಪಡೆಯಲು ತಮ್ಮ ತಾಲ್ಲೂಕುಗಳಲ್ಲಿ ವ್ಯಾಪಕ ಪ್ರಚಾರ ನೀಡುವುದು ಹಾಗೂ ಸ್ಥಳೀಯ ಪತ್ರಿಕೆಗಳಲ್ಲಿ ಅರ್ಜಿಗಳನ್ನು ಆಹ್ವಾನಿಸುವುದು. ಯೋಜನೆಯ ಮಾರ್ಗ ಸೂಚಿಯನ್ವಯ ಅಂಗವಿಕಲರಿಂದ ಪಡೆದಂತಹ ಅರ್ಜಿಗಳನ್ನು ಪರಿಶೀಲಿಸಿ ಸದರಿ ಅರ್ಜಿಗಳನ್ನು ಮಂಜೂರಾತಿಗಾಗಿ ತಮ್ಮ ಜಿಲ್ಲೆಯ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆರವರಿಗೆ ಸಲ್ಲಿಸುವುದು. ಈ ಅರ್ಜಿಗಳನ್ನು ಪರಿಶೀಲಿಸಿ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು, ಆಯಾ ಜಿಲ್ಲೆಯ ಉಪ ನಿರ್ದೇಶಕರ ಅಧ್ಯಕ್ಷತೆಯಲ್ಲಿನ ಜಿಲ್ಲಾ ಮಟ್ಟದ ಸಮಿತಿಗೆ ಫಲಾನುಭವಿಗಳ ಆಯ್ಕೆಗಾಗಿ ಸಲ್ಲಿಸುವುದು.

ಆಯಾಯ ಜಿಲ್ಲೆಯ ಉಪ ನಿರ್ದೇಶಕರು ಅರ್ಜಿಗಳನ್ನು ಜಿಲ್ಲಾ ಮಟ್ಟದ ಸಮಿತಿಯಲ್ಲಿ ಯೋಜನೆಗೆ ನಿಗದಿಪಡಿಸಿರುವ ಮಾರ್ಗಸೂಚಿಗಳಂತೆ ಪರಿಶೀಲಿಸಿ ಆಯ್ಕೆಮಾಡಿ ಮಂಜೂರಾತಿ ನೀಡಲು ಕ್ರಮವಹಿಸುವುದು. ಜಿಲ್ಲಾ ಮಟ್ಟದ ಸಮಿತಿಯನ್ನು ಕೆಳಕಂಡಂತೆ ರಚಿಸಲಾಗಿದೆ.

### ಜಿಲ್ಲಾ ಮಟ್ಟದ ಸಮಿತಿ

| ಕ್ರ. ಸಂ. | ಪದನಾಮ | ವಿವರ |
|---|---|---|
| 1 | ಉಪ ನಿರ್ದೇಶಕರು, ಮಮಅಇ | ಅಧ್ಯಕ್ಷರು |
| 2 | ಜಿಲ್ಲಾ ಉದ್ಯೋಗ ವಿನಿಮಯ ಅಧಿಕಾರಿಗಳು | ಸದಸ್ಯರು |
| 3 | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು | ಸದಸ್ಯರು |
| 4 | ಸಹಾಯಕ ನಿರ್ದೇಶಕರು, ಸಾಮಾಜಿಕ ಭದ್ರತೆ ಮತ್ತು ಪಿಂಚಣಿ ಇಲಾಖೆ/ ಜಿಲ್ಲಾ ಪ್ರತಿನಿಧಿ | ಸದಸ್ಯರು |
| 5 | ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು | ಸದಸ್ಯ ಕಾರ್ಯದರ್ಶಿ |

ಆಯಾ ಜಿಲ್ಲೆಯ ಉಪ ನಿರ್ದೇಶಕರ ಅಧ್ಯಕ್ಷತೆಯಲ್ಲಿ ನಡೆದ ಜಿಲ್ಲಾ ಮಟ್ಟದ ಸಮಿತಿಯ ಸಭಾ ನಡಾವಳಿಯಂತೆ ಸದಸ್ಯ ಕಾರ್ಯದರ್ಶಿಗಳಾದ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು ಪಟ್ಟಿ ಸಿದ್ಧಪಡಿಸಿ ನಿರುದ್ಯೋಗ ಭತ್ಯೆಗಾಗಿ ಉಪ ನಿರ್ದೇಶಕರಿಂದ ಮಂಜೂರಾತಿ ಆದೇಶ ಪಡೆದು ಮಾರ್ಗಸೂಚಿಯನುಸಾರ ವಿತರಿಸಲು ಆಯಾ ತಾಲ್ಲೂಕಿನ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳಿಗೆ ನೀಡುವುದು.

ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಪ್ರತಿ ಫಲಾನುಭವಿಗೆ ನಿರುದ್ಯೋಗ ಭತ್ಯೆಯನ್ನು ಆರ್.ಟಿ.ಜಿ.ಎಸ್. ಮುಖಾಂತರ ಅವರ ಬ್ಯಾಂಕ್ ಖಾತೆಗೆ ವರ್ಗಾಯಿಸುವುದು. ಪ್ರತಿ ಆರ್ಥಿಕ ವರ್ಷದ ಪ್ರಾರಂಭದಲ್ಲಿ ಫಲಾನುಭವಿಯಿಂದ ನಿರುದ್ಯೋಗಿ ಎಂಬ ಬಗ್ಗೆ ಪತ್ರಾಂಕಿತ ಅಧಿಕಾರಿಗಳಿಂದ ದೃಢೀಕರಿಸಲ್ಪಟ್ಟ ಪ್ರಮಾಣ ಪತ್ರವನ್ನು ಪಡೆದುಕೊಂಡು ನಿರುದ್ಯೋಗಿ ಎಂಬ ಬಗ್ಗೆ ಖಚಿತಪಡಿಸಿಕೊಳ್ಳುವುದು.

ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಈ ಯೋಜನೆಯ ಪ್ರಗತಿಯನ್ನು ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಮತ್ತು ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ರವರಿಗೆ ಪ್ರತಿ ಮಾಹೆ ಕಳುಹಿಸಿಕೊಡತಕ್ಕದ್ದು.

22/8/2016
(ಜಯಲಕ್ಷ್ಮಿ)
ಸರ್ಕಾರದ ಅಧೀನ ಕಾರ್ಯದರ್ಶಿ-2,
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲಚೇತನರ ಮತ್ತು ಹಿರಿಯ ನಾಗರಿಕರ
ಸಬಲೀಕರಣ ಇಲಾಖೆ.

ಅನುಬಂಧ - 2

## ಕರ್ನಾಟಕ ಸರ್ಕಾರ

## ಅರ್ಜಿ ನಮೂನೆ

## ನಿರುದ್ಯೋಗಿ ವಿಕಲಚೇತನರಿಗೆ ಮಾಸಿಕ ನಿರುದ್ಯೋಗ ಭತ್ಯೆ ನೀಡುವ ಯೋಜನೆ

(ಸರ್ಕಾರದ ಆದೇಶ ಸಂ:ಮಮಇ/112/ಪಿಹೆಚ್‌ಪಿ/2014 (ಭಾಗ-2), ಬೆಂಗಳೂರು, ದಿ: 22.03.2016)

ಇತ್ತೀಚಿನ ಫೋಟೋ

| | | |
|---|---|---|
| 1 | ಅರ್ಜಿದಾರರ ಹೆಸರು : | |
| 2 | ಗಂಡು / ಹೆಣ್ಣು : | |
| 3 | ತಂದೆ / ಪೋಷಕರ ಹೆಸರು / ಗಂಡ ಹೆಸರು : | |
| 4 | ಜನ್ಮ ದಿನಾಂಕ:<br><br>ಅರ್ಜಿದಾರರ ವಯಸ್ಸು:<br>(ಅರ್ಜಿ ಸಲ್ಲಿಸುವ ದಿನಾಂಕದಂದು ಇರುವಂತೆ ವಯಸ್ಸಿನ ಬಗ್ಗೆ ಎಸ್.ಎಸ್.ಎಲ್.ಸಿ ಅಂಕಪಟ್ಟಿ ಯೊಂದಿಗೆ ದೃಢೀಕರಣ ಪತ್ರವನ್ನು ಸಲ್ಲಿಸತಕ್ಕದ್ದು) | |
| 5 | ಅಂಗವಿಕಲತೆಯ ವಿಧ ಮತ್ತು ಸ್ವರೂಪ:<br>ದೃಷ್ಟಿದೋಷ/ಶ್ರವಣದೋಷ/ದೈಹಿಕ/ಬುದ್ಧಿಮಾಂದ್ಯತೆ/<br>(ಅಂಗವಿಕಲತೆಯ ಬಗ್ಗೆ ದೃಢೀಕರಣ ಪತ್ರ) | |
| 6 | ಅರ್ಜಿದಾರರ ವಿಳಾಸ:<br>ಅ) ತಾತ್ಕಾಲಿಕ ವಿಳಾಸ: | |
| | ಆ) ಖಾಯಂ ವಿಳಾಸ: | |
| 7 | ಧರ್ಮ, ಜಾತಿ ಮತ್ತು ಪಂಗಡ: | |
| 8 | ವಾರ್ಷಿಕ ವರಮಾನ | |
| 9 | ವಿಶೇಷ ಉದ್ಯೋಗ ವಿನಿಮಯ ಕೇಂದ್ರ / ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ನೊಂದಾಯಿಸಿರುವ ಸಂಖ್ಯೆ ಮತ್ತು ದಿನಾಂಕ: (ಪ್ರತಿ ಸಲ್ಲಿಸುವುದು) | |
| 10 | ನಿರುದ್ಯೋಗಿ ಅಂಗವಿಕಲರೆಂಬ ಬಗ್ಗೆ ಪತ್ರಾಂಕಿತ ಅಧಿಕಾರಿಗಳಿಂದ ದೃಢಿಕರಣ ಪತ್ರವನ್ನು ಸಲ್ಲಿಸಲಾಗಿದೆಯೇ: (ಪ್ರತಿ ಲಗತ್ತಿಸುವುದು) | |

| | | |
|---|---|---|
| | ಅರ್ಜಿದಾರರು ಎಷ್ಟು ವರ್ಷಗಳಿಂದ ನಮೂದಿಸಿರುವ ವಿಳಾಸದಲ್ಲಿ ವಾಸವಾಗಿರುತ್ತಾರೆ: | |
| 12 | ಅರ್ಜಿದಾರರ ಬ್ಯಾಂಕ್ ಖಾತೆ ಸಂಖ್ಯೆ:<br>ಬ್ಯಾಂಕಿನ ಹೆಸರು ಮತ್ತು ವಿಳಾಸ:<br>(ಐ.ಎಫ್.ಎಸ್.ಸಿ ಸಂಖ್ಯೆಯೊಂದಿಗೆ) | |

ಮೇಲೆ ನೀಡಿದ ಮಾಹಿತಿಯು ಸತ್ಯವಾಗಿರುತ್ತದೆಂದು ದೃಢೀಕರಿಸುತ್ತೇನೆ.

(ಸಹಿ)
(ಹೆಸರು)

ಮೇಲಿನ ಅಭ್ಯರ್ಥಿಯು ಒದಗಿಸಿರುವ ವಿವರಗಳನ್ನು ಪರಿಶೀಲಿಸಲಾಗಿದೆ ಹಾಗೂ ಸದರಿ ಅಭ್ಯರ್ಥಿಯು ಯೋಜನೆಯಡಿ ನಿರುದ್ಯೋಗ ಭತ್ಯೆ ಪಡೆಯಲು ಅರ್ಹನಿರುವುದಾಗಿ ದೃಢೀಕರಿಸಿದೆ.

(ಸಹಿ)
ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು
ತಾಲ್ಲೂಕು ------------

19

33

ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: 'ಆಧಾರ' ಸ್ವಯಂ ಉದ್ಯೋಗ ಯೋಜನೆಯ ಘಟಕ ವೆಚ್ಚವನ್ನು ಈಗಿರುವ ರೂ.35,000ಗಳಿಂದ ರೂ.1,00,000/-ಗಳಿಗೆ ಹೆಚ್ಚಿಸಿ, ಇದರಲ್ಲಿ ಶೇ.50ರಷ್ಟು ಬ್ಯಾಂಕ್ ಸಾಲ ಮತ್ತು ಶೇ.50ರಷ್ಟು ಸಬ್ಸಿಡಿ ಮೊತ್ತವನ್ನು ನೀಡುವ ಬಗ್ಗೆ.

ಓದಲಾಗಿದೆ: ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ನಿರ್ದೇಶನಾಲಯದ ಏಕಕಡತ ಸಂಖ್ಯೆ:ವಿಹಿನಾಕಇ/ಹಿ.7/ಆಧಾರ/ಯೋ.ಕಾ/40/2018-19

<u>ಪ್ರಸ್ತಾವನೆ:</u>

2018-19ನೇ ಸಾಲಿನಲ್ಲಿ ಮಾನ್ಯ ಮುಖ್ಯಮಂತ್ರಿಯವರ ಆಯವ್ಯಯ ಭಾಷಣದ ಕಂಡಿಕೆ-92ರಂತೆ 'ಆಧಾರ' ಸ್ವಯಂ ಉದ್ಯೋಗ ಯೋಜನೆಯ ಘಟಕ ವೆಚ್ಚವನ್ನು ಈಗಿರುವ ರೂ.35,000ಗಳಿಂದ ರೂ.1,00,000/-ಗಳಿಗೆ ಹೆಚ್ಚಿಸಿ, ಇದರಲ್ಲಿ ಶೇ.50ರಷ್ಟು ಬ್ಯಾಂಕ್ ಸಾಲ ಮತ್ತು ಶೇ.50ರಷ್ಟು ಸಬ್ಸಿಡಿ ಮೊತ್ತವನ್ನು ನೀಡುವ ಬಗ್ಗೆ ಘೋಷಿಸಿರುತ್ತಾರೆ.

ಇತ್ತೀಚಿನ ಹಣದುಬ್ಬರದ ದಿನಗಳಲ್ಲಿ ಸದರಿ ಮೊತ್ತನ್ನು ಸ್ವಯಂ ಉದ್ಯೋಗ ಕೈಗೊಳ್ಳಲು ಸಾಕಾಗುವುದಿಲ್ಲವೆಂದು ಹಲವು ಬಾರಿ ವಿಕಲಚೇತನರು ಮನವಿ ಸಲ್ಲಿಸಿ, ಪ್ರಸ್ತುತ ದರವನ್ನು ಹೆಚ್ಚಿಸುವಂತೆ ಒತ್ತಾಯಿಸಿರುತ್ತಾರೆ. ಇಂದಿನ ಆರ್ಥಿಕ ಪರಿಸ್ಥಿತಿಯಲ್ಲಿ ಕಡಿಮೆ ಮೊತ್ತದ ಬಂಡವಾಳ ಹೂಡಿ ವ್ಯಾಪಾರ ಮಾಡುವುದು ಅಥವಾ ಸ್ವಯಂ ಉದ್ಯೋಗ ಕೈಗೊಳ್ಳುವುದು ಕಷ್ಟಸಾಧ್ಯವಿದ್ದು, ಲಾಭವು ಹೆಚ್ಚಿಗೆಯಾಗದ ಕಾರಣ ಸರ್ಕಾರದಿಂದ ಪಡೆದ ಸಾಲವನ್ನು ಹಿಂದಿರುಗಿಸಲು ವಿಕಲಚೇತನ ಫಲಾನುಭವಿಗಳಿಗೆ ಸಾಧ್ಯವಾಗುವುದಿಲ್ಲ. ಹೀಗಾಗಿ ಸದರಿ ಯೋಜನೆಯಡಿ ನೀಡಲಾಗುವ ಮೊತ್ತವನ್ನು ರೂ.35,000/-ಗಳಿಂದ ರೂ.1,00,000/-ಗಳಿಗೆ ಹೆಚ್ಚಿಸಲಾಗಿದೆ. ಈ ಮೊತ್ತದಲ್ಲಿ ಶೇ.50ರಷ್ಟು ಬ್ಯಾಂಕ್ ಸಾಲ ಹಾಗೂ ಶೇ.50ರಷ್ಟು ಸಬ್ಸಿಡಿ ಇದ್ದು, ಸಬ್ಸಿಡಿ ಮೊತ್ತವನ್ನು ಇಲಾಖೆಯು ಭರಿಸಲಿದ್ದು, 2018-19ನೇ ಸಾಲಿನಲ್ಲಿ 600 ಫಲಾನುಭವಿಗಳಿಗೆ ಯೋಜನಾ ಸೌಲಭ್ಯ ಕಲ್ಪಿಸಲು ಸಹಾಯಧನಕ್ಕಾಗಿ ರೂ.3.00 ಕೋಟಿಗಳ ಅವಶ್ಯಕತೆಯಿದ್ದು, ಸದರಿ ವೆಚ್ಚವನ್ನು ಲೆಕ್ಕಶೀರ್ಷಿಕೆ:2235-02-101-0-99 (ಯೋಜನೆ), ಉದ್ದೇಶಿತ ಲೆಕ್ಕಶೀರ್ಷಿಕೆ:100 (ಸಹಾಯಾನುದಾನ), 422-ಪ.ಜಾತಿ ಮತ್ತು 423-ಪ.ಪಂಗಡದಡಿ ಒದಗಿಸಲು ಮೇಲೆ ಓದಲಾದ ಏಕಕಡತದಲ್ಲಿ ನಿರ್ದೇಶಕರು, ವಿಕಲಚೇತನ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆರವರು ಕೋರಿರುತ್ತಾರೆ.

ಮೇಲಿನ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

**<u>ಸರ್ಕಾರದ ಆದೇಶ ಸಂಖ್ಯೆ: ಮಮಇ 139 ಪಿಹೆಚ್‌ಪಿ 2018, ಬೆಂಗಳೂರು, ದಿನಾಂಕ:14.08.2018</u>**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2018-19ನೇ ಸಾಲಿನಲ್ಲಿ ಮಾನ್ಯ ಮುಖ್ಯಮಂತ್ರಿಯವರ ಆಯವ್ಯಯ ಭಾಷಣದ ಕಂಡಿಕೆ-92ರಂತೆ 'ಆಧಾರ' ಸ್ವಯಂ ಉದ್ಯೋಗ ಯೋಜನೆಯ ಘಟಕ ವೆಚ್ಚವನ್ನು ಈಗಿರುವ ರೂ.35,000 ಗಳಿಂದ ರೂ.1,00,000/-ಗಳಿಗೆ ಹೆಚ್ಚಿಸಿ, ಇದರಲ್ಲಿ ಶೇ.50ರಷ್ಟು ಬ್ಯಾಂಕ್ ಸಾಲ ಮತ್ತು ಶೇ.50ರಷ್ಟು ಸಬ್ಸಿಡಿ ಮೊತ್ತವನ್ನು ನೀಡುವ ಯೋಜನೆಗೆ ನಂತರದಲ್ಲಿ ಹೊರಡಿಸಲಾಗುವ ಮಾರ್ಗಸೂಚಿಯನ್ವಯ ನಿಯಮಾನುಸಾರವಾಗಿ ಮತ್ತು ಪಾರದರ್ಶಕತೆಯನ್ವಯ ಅನುಷ್ಠಾನಗೊಳಿಸುವ ಷರತ್ತಿಗೊಳಪಟ್ಟು ಆಡಳಿತಾತ್ಮಕ ಮಂಜೂರಾತಿ ನೀಡಿದೆ.

ಈ ಯೋಜನೆಗೆ ಅವಶ್ಯವಿರುವ ರೂ.3,00,00,000/- (ಮೂರುಕೋಟಿ ರೂಪಾಯಿಗಳು)ಗಳ ವೆಚ್ಚವನ್ನು 2018-19ನೇ ಸಾಲಿನ ಲೆಕ್ಕಶೀರ್ಷಿಕೆ:2235-02-101-0-99ರಡಿ ಒದಗಿಸುವ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಕ್ರಮವಾಗಿ ಆರ್ಥಿಕ ಇಲಾಖೆ ಹಾಗೂ ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 428 ವೆಚ್ಚ-10/2018, ದಿ:28.07.2018 ಮತ್ತು ಪಿಡಿ 68 ಪಿಎಂಎಂ 2018, ದಿ:26.07.2018ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ

(signature) 1/8/2018
(ಜಯಲಕ್ಷ್ಮಿ)
ಸರ್ಕಾರದ ಅಧೀನ ಕಾರ್ಯದರ್ಶಿ-2
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ.

ಇವರಿಗೆ:

1. ಪ್ರಧಾನ ಮಹಾಲೇಖಪಾಲರು(ಜಿ& ಎಸ್ ಎಸ್ ಎ), ಕರ್ನಾಟಕ, ಹೊಸ ಕಟ್ಟಡ, ಆಡಿಟ್ ಭವನ", ಅಂಚೆ ಪೆಟ್ಟಿಗೆ ಸಂಖ್ಯೆ: 5398, ಬೆಂಗಳೂರು-560001.
2. ಪ್ರಧಾನ ಮಹಾಲೇಖಪಾಲರು(ಇ & ಆರ್ ಎಸ್ ಎ), ಕರ್ನಾಟಕ, ಹೊಸ ಕಟ್ಟಡ, ಆಡಿಟ್ ಭವನ", ಅಂಚೆ ಪೆಟ್ಟಿಗೆ ಸಂಖ್ಯೆ: 5398, ಬೆಂಗಳೂರು-560001.
3. ಪ್ರಧಾನ ಮಹಾಲೇಖಪಾಲರು(ಎ&ಇ), ಕರ್ನಾಟಕ, ಹೊಸ ಕಟ್ಟಡ, ಆಡಿಟ್ ಭವನ",ಅಂಚೆ ಪೆಟ್ಟಿಗೆ ಸಂಖ್ಯೆ: 5329, ಬೆಂಗಳೂರು-560001
4. ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ವಿ.ವಿ.ಗೋಪುರ, ಬೆಂಗಳೂರು.
5. ಆಯುಕ್ತರು, ರಾಜ್ಯ ಅಂಗವಿಕಲ ವ್ಯಕ್ತಿಗಳ ಅಧಿನಿಯಮದ ಕಛೇರಿ ಕರ್ನಾಟಕ, ನಂ.55, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯ ಕಟ್ಟಡ,ಅಭಯ ಸಂಕೀರ್ಣ,2ನೇ ಮಹಡಿ, ರಿಸಲ್ದಾರ್ ರಸ್ತೆ, ಶೇಷಾದ್ರಿ ಪುರಂ,ಬೆಂಗಳೂರು.
6. ಆಂತರಿಕ ಆರ್ಥಿಕ ಸಲಹೆಗಾರರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ವಿಕಾಸಸೌಧ, ಬೆಂಗಳೂರು.
7. ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ ವೆಚ್ಚ(10), ವಿಧಾನ ಸೌಧ, ಬೆಂಗಳೂರು
8. ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನಸೌಧ, ಬೆಂಗಳೂರು.
9. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರ ಆಪ್ತ ಕಾರ್ಯದರ್ಶಿ, ಬಹುಮಹಡಿ ಕಟ್ಟಡ, ಬೆಂಗಳೂರು.
10. ಸರ್ಕಾರದ ಉಪ ಕಾರ್ಯದರ್ಶಿಗಳು, ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರ ಆಪ್ತ ಸಹಾಯಕರು, ಬಹುಮಹಡಿ ಕಟ್ಟಡ, ಬೆಂಗಳೂರು.
11. ಶಾಖಾಧಿಕಾರಿ, ಸ್ವೀಕೃತಿ ಮತ್ತು ರವಾನೆ ಶಾಖೆ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು.
12. ಶಾಖಾ ರಕ್ಷಾ ಕಡತ/ ಒಡಿಜಿಸಿ/ ಹೆಚ್ಚುವರಿ ಪ್ರತಿಗಳು.

'ಆಧಾರ' ಸ್ವಯಂ ಉದ್ಯೋಗ ಯೋಜನೆಯ ಘಟಕ ವೆಚ್ಚವನ್ನು ಈಗಿರುವ ರೂ.35,000ಗಳಿಂದ ರೂ.1,00,000/-ಗಳಿಗೆ ಹೆಚ್ಚಿಸಿ, ಇದರಲ್ಲಿ ಶೇ.50ರಷ್ಟು ಬ್ಯಾಂಕ್ ಸಾಲ ಮತ್ತು ಶೇ.50ರಷ್ಟು ಸಬ್ಸಿಡಿ ಮೊತ್ತವನ್ನು ನೀಡುವ ಬಗ್ಗೆ ಹೊರಡಿಸಲಾದ ಆದೇಶ ಸಂಖ್ಯೆ:ಮಮಇ 139 ಪಿಹೆಚ್‌ಪಿ 2018, ದಿ:14.08.2018ಕ್ಕೆ ಮಾರ್ಗಸೂಚಿ:

ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯ ವತಿಯಿಂದ ವಿಕಲಚೇತನರು ಸ್ವಯಂ ಉದ್ಯೋಗ ಕೈಗೊಳ್ಳಲು ಆಧಾರ ಯೋಜನೆಯನ್ನು 1995-1996ನೇ ಸಾಲಿನಿಂದ ಅನುಷ್ಠಾನಗೊಳಿಸಲಾಗುತ್ತಿದೆ. ಸರ್ಕಾರದ ಆದೇಶ ಸಂಖ್ಯೆ: ಮಮಅ 176 ಪಿಹೆಚ್‌ಪಿ 1995 ಬೆಂಗಳೂರು, ದಿನಾಂಕ:01.08.1995ರಲ್ಲಿ ಆಧಾರ ಯೋಜನೆಯ ರೂಪುರೇಷೆಗಳು ಹಾಗೂ ಅನುಷ್ಠಾನ ಮಾಡುವ ವಿಧಾನಗಳ ಬಗ್ಗೆ ಮಾರ್ಗಸೂಚಿಗಳನ್ನು ಹೊರಡಿಸಲಾಗಿರುತ್ತದೆ. ನಂತರ ದಿ:13.11.1998, ದಿ:28.08.2006 ಹಾಗೂ ದಿ:25.06.2007ರ ಸರ್ಕಾರದ ಆದೇಶಗಳಲ್ಲಿ ಯೋಜನೆಯ ಘಟಕ ವೆಚ್ಚವನ್ನು ಪರಿಷ್ಕರಿಸಲಾಗಿರುತ್ತದೆ. ಅದರಂತೆ ರೂ.15,000/-ಗಳ ಗೂಡಂಗಡಿಯನ್ನು ಉಚಿತವಾಗಿಯೂ ಹಾಗೂ ಪ್ರಾರಂಭಿಕ ಬಂಡವಾಳ ರೂ.20,000/-ಗಳನ್ನು ಸಾಲದ ರೂಪದಲ್ಲಿ ಪ್ರತಿ ಫಲಾನುಭವಿಗೆ ನೀಡಲಾಗುತ್ತಿತ್ತು. 2018-19ನೇ ಸಾಲಿನ ಆಯವ್ಯಯ ಭಾಷಣದಲ್ಲಿ "ಆಧಾರ ಸ್ವಯಂ ಉದ್ಯೋಗ ಯೋಜನೆಯ ಘಟಕ ವೆಚ್ಚವನ್ನು ಈಗಿರುವ ರೂ.35,000/-ಗಳಿಂದ ರೂ.1,00,000/-ಗಳಿಗೆ ಹೆಚ್ಚಿಸಿ, ಇದರಲ್ಲಿ ಶೇಕಡ 50ರಷ್ಟು ಬ್ಯಾಂಕ್ ಸಾಲ ಮತ್ತು ಶೇಕಡ 50ರಷ್ಟು ಸಬ್ಸಿಡಿ" ಎಂದು ಘೋಷಿಸಲಾಗಿದೆ. ಅದರಂತೆ ಆಧಾರ ಯೋಜನೆಯ ಮಾರ್ಗಸೂಚಿಗಳನ್ನು ಈ ಕೆಳಕಂಡಂತೆ ಪರಿಷ್ಕರಿಸಿ 2018-19ನೇ ಸಾಲಿನಿಂದ ಜಾರಿಗೊಳಿಸಲಾಗುವುದು.

1. ಆಧಾರ ಯೋಜನೆಯ ಘಟಕ ವೆಚ್ಚವನ್ನು ರೂ.35,000/- ಗಳಿಂದ ರೂ.1,00,000/-ಕ್ಕೆ ಹೆಚ್ಚಿಸಿದ್ದು, ಇದರಲ್ಲಿ ಶೇಕಡ 50ರಷ್ಟು ಬ್ಯಾಂಕ್ ಸಾಲ ಇದ್ದು, ಸಹಾಯಧನವು ಘಟಕ ವೆಚ್ಚದ ಶೇ.50ರಷ್ಟು ಹಾಗೂ ರೂ.50,000ಗಳ ಗರಿಷ್ಠ ಮಿತಿಯೊಳಗಿರತಕ್ಕದ್ದು.
2. ಅರ್ಜಿದಾರ ವಿಕಲಚೇತನರು 18 ರಿಂದ 55 ವರ್ಷ ವಯಸ್ಸಿನೊಳಗಿನ ನಿರುದ್ಯೋಗಿಯಾಗಿರಬೇಕು.
3. ಫಲಾನುಭವಿಗಳಿಗೆ ಶೇ.40 ಅಥವಾ ಅದಕ್ಕಿಂತ ಹೆಚ್ಚು ಅಂಗವಿಕಲತೆ ಇರತಕ್ಕದ್ದು.
4. ಅರ್ಜಿದಾರರು ಕನಿಷ್ಠ ಕಳೆದ ಹತ್ತು ವರ್ಷಗಳಿಂದ ಕರ್ನಾಟಕ ರಾಜ್ಯದಲ್ಲಿ ವಾಸವಾಗಿರಬೇಕು.
5. ಅರ್ಜಿದಾರರು ಬ್ಯಾಂಕುಗಳಿಗೆ ಹಾಗೂ ಸರ್ಕಾರಕ್ಕೆ ಈ ಹಿಂದೆ ಸುಸ್ತಿದಾರರಾಗಿರಬಾರದು.
6. ಅರ್ಜಿದಾರರ ವಾರ್ಷಿಕ ಆದಾಯ ಗ್ರಾಮೀಣ ಪ್ರದೇಶದವರಿಗೆ ರೂ.11,500/- ಹಾಗೂ ಪಟ್ಟಣ ಪ್ರದೇಶದವರಿಗೆ ರೂ.24,000/-ಗಳನ್ನು ಮೀರಿರಬಾರದು.
7. ತೀವ್ರ ಬುದ್ಧಿಮಾಂದ್ಯತೆ ಇರುವವರನ್ನು ಹೊರತುಪಡಿಸಿ ಇತರೆ ವಿಕಲಚೇತನರು ಈ ಯೋಜನೆಯಡಿ ಸೌಲಭ್ಯ ಪಡೆಯಲು ಅರ್ಹರಿರುತ್ತಾರೆ.
8. ರಾಷ್ಟ್ರೀಕೃತ ಬ್ಯಾಂಕುಗಳ ಜೊತೆಗೆ ಜಿಲ್ಲಾ ಪತ್ತಿನ ಸಹಕಾರ ಬ್ಯಾಂಕ್ ಮತ್ತು ಮಹಿಳಾ ಸಹಕಾರ ಬ್ಯಾಂಕುಗಳ ಮೂಲಕವೂ ಸಾಲವನ್ನು ಒದಗಿಸಲಾಗುವುದು.
9. ಫಲಾನುಭವಿಗಳಿಗೆ ಆಯಾ ಜಿಲ್ಲೆಗಳ ಲೀಡ್ ಬ್ಯಾಂಕ್/ಇತರೆ ಬ್ಯಾಂಕ್‌ಗಳ/ರೂಡ್‌ಸೆಟ್ ತರಬೇತಿ ಕೇಂದ್ರಗಳ ಮೂಲಕ ಸೂಕ್ತ ತರಬೇತಿಯನ್ನು ಕೊಡಿಸುವುದು.
10. ಫಲಾನುಭವಿಗಳು ಕೈಗೆತ್ತಿಕೊಳ್ಳಬಹುದಾದ ಯೋಜನೆಗಳ ಪಟ್ಟಿಯನ್ನು ಅನುಬಂಧ-1ರಲ್ಲಿ ಲಗತ್ತಿಸಿದೆ. ಈ ಚಟುವಟಿಕೆಗಳಲ್ಲದೆ ಬ್ಯಾಂಕ್ ಅನುಮೋದಿಸುವ ಇತರೆ ಲಾಭದಾಯಕರವಾದ ಚಟುವಟಿಕೆಗಳನ್ನೂ ಸಹ ಕೈಗೆತ್ತಿಕೊಳ್ಳಬಹುದಾಗಿದೆ.

II. ಈ ಯೋಜನೆಯಡಿಯಲ್ಲಿ ನೂತನವಾಗಿ ಸ್ಥಾಪಿಸುವಂತಹ, ಈಗಾಗಲೇ ಅಸ್ತಿತ್ವದಲ್ಲಿದ್ದು, ವಿಸ್ತರಿಸಬಹುದಾದಂತಹ ಚಟುವಟಿಕೆಗಳಿಗೆ ಸಾಲ ಸೌಲಭ್ಯ ಒದಗಿಸಲಾಗುವುದು.

**ಯೋಜನೆಯ ಕಾರ್ಯಾನುಷ್ಠಾನ ವಿಧಾನಗಳು:**

ಪ್ರತಿ ಜಿಲ್ಲೆಯ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು ಯೋಜನೆಯ ಅನುಷ್ಠಾನಾಧಿಕಾರಿಗಳಾಗಿರುತ್ತಾರೆ. ಜಿಲ್ಲಾ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯ ಮುಖಾಂತರ ಸ್ಥಳೀಯ ದಿನ ಪತ್ರಿಕೆಗಳಲ್ಲಿ, ಆಕಾಶವಾಣಿ ಮತ್ತು ಉದ್ಯೋಗ ವಿನಿಮಯ ಕೇಂದ್ರ ಹಾಗೂ ತಾಲ್ಲೂಕಿನ ಮುಖ್ಯ ಕಚೇರಿಗಳಲ್ಲಿ ಸೂಚನಾ ಫಲಕಗಳ ಮೂಲಕ ಪ್ರಚಾರ ನೀಡಿ ಅರ್ಜಿಗಳನ್ನು ಆಹ್ವಾನಿಸುವುದು. ಅರ್ಜಿಗಳನ್ನು ಪರಿಶೀಲಿಸುವಾಗ ಗಮನಿಸಬೇಕಾದ ಅಂಶಗಳನ್ನು ಅನುಬಂಧ–2ರಲ್ಲಿ ನೀಡಲಾಗಿದೆ. ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು ಅರ್ಜಿಗಳನ್ನು ಪರಿಶೀಲಿಸಿ, ಸ್ಥಳ ತಪಾಸಣೆ ಮಾಡಿ, ಜಿಲ್ಲಾ ಆಯ್ಕೆ ಸಮಿತಿಯ ಸಭೆಯಲ್ಲಿ ಸಂದರ್ಶನದ ಮೂಲಕ ಫಲಾನುಭವಿಗಳನ್ನು ಆಯ್ಕೆ ಮಾಡುವುದು.

ಜಿಲ್ಲಾ ಮಟ್ಟದ ಆಯ್ಕೆ ಸಮಿತಿಯು ಈ ಕೆಳಗಿನ ಸದಸ್ಯರನ್ನು ಒಳಗೊಂಡಿರುತ್ತದೆ.

| | | |
|---|---|---|
| 1. | ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು, ಜಿಲ್ಲಾ ಪಂಚಾಯಿತಿ | – ಅಧ್ಯಕ್ಷರು |
| 2. | ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | – ಸದಸ್ಯರು |
| 3. | ಲೀಡ್ ಬ್ಯಾಂಕ್ ಮ್ಯಾನೇಜರ್ | – ಸದಸ್ಯರು |
| 4. | ಸಂಬಂಧಪಟ್ಟ ಸೇವಾ ಕ್ಷೇತ್ರದ ಬ್ಯಾಂಕಿನ ಮ್ಯಾನೇಜರ್ ಅಥವಾ ಡಿಎಲ್‌ಬಿಸಿ ಸಂಚಾಲಕರು | – ಸದಸ್ಯರು |
| 5. | ವಿಕಲಚೇತನರಿಗಾಗಿ ಶ್ರಮಿಸುತ್ತಿರುವ ಸ್ವಯಂ ಸೇವಾ ಸಂಸ್ಥೆಯ ಪ್ರತಿನಿಧಿ ಒಬ್ಬರು (ಇವರನ್ನು ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು 2 ವರ್ಷ ಅವಧಿಗೆ ನಾಮನಿರ್ದೇಶನ ಮಾಡುವುದು) | – ಸದಸ್ಯರು |
| 6. | ವಿಕಲಚೇತನರಿಗಾಗಿ ಶ್ರಮಿಸುತ್ತಿರುವ ವಿಕಲಚೇತನ ವ್ಯಕ್ತಿ ಒಬ್ಬರು (ಇವರನ್ನು ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು 2 ವರ್ಷ ಅವಧಿಗೆ ನಾಮನಿರ್ದೇಶನ ಮಾಡುವುದು) | – ಸದಸ್ಯರು |
| 7. | ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು | – ಸದಸ್ಯ ಕಾರ್ಯದರ್ಶಿಗಳು |

ಆಯ್ಕೆ ಸಮಿತಿಯು ಶಿಫಾರಸ್ಸು ಮಾಡಿದ ಫಲಾನುಭವಿಗಳ ಅರ್ಜಿಗಳನ್ನು ಸಾಲ ಮಂಜೂರು ಮಾಡಲು ಆಯಾ ಸೇವಾ ಕ್ಷೇತ್ರದ ಬ್ಯಾಂಕುಗಳಿಗೆ ಕಳುಹಿಸತಕ್ಕದ್ದು. ಬ್ಯಾಂಕುಗಳು ಸಾಲ ಮಂಜೂರು ಮಾಡಿದ ನಂತರ ಸಹಾಯಧನ ಮೊತ್ತವನ್ನು ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು ಸಂಬಂಧಿಸಿದ ಬ್ಯಾಂಕುಗಳಿಗೆ ನೇರವಾಗಿ ಖಜಾನೆ–2ರ ಮೂಲಕ ಬಿಡುಗಡೆ ಮಾಡತಕ್ಕದ್ದು.

ಸಮಿತಿಯ ಕರ್ತವ್ಯಗಳು:

1. ಜಿಲ್ಲಾ ಮಟ್ಟದ ಬ್ಯಾಂಕರ್ಸ್ ಸಮಿತಿ/ತಾಲ್ಲೂಕು ಮಟ್ಟದ ಬ್ಯಾಂಕರ್ಸ್ ಸಮಿತಿಯಲ್ಲಿ ಬ್ಯಾಂಕ್‌ಗಳಿಗೆ ಭೌತಿಕ ಗುರಿ ನಿಗಧಿಪಡಿಸುವುದು.
2. ಫಲಾನುಭವಿಗಳ ಪಟ್ಟಿಯನ್ನು ತಯಾರು ಮಾಡುವುದು.
3. ಜಿಲ್ಲೆಗಳಿಗೆ ನೀಡಲಾಗುವ ಗುರಿಗೆ ಅನುಗುಣವಾಗಿ ಸೂಕ್ತ ಫಲಾನುಭವಿಗಳನ್ನು ಸಂದರ್ಶನದ ಮೂಲಕ ಆಯ್ಕೆ ಮಾಡುವುದು.
4. ಈ ಬಗ್ಗೆ ಉದ್ಭವಿಸಬಹುದಾದ ಸಮಸ್ಯೆಗಳನ್ನು ಚರ್ಚಿಸಿ, ಪರಿಹಾರ ಕಂಡುಹಿಡಿಯುವುದು.
5. ಆಯ್ಕೆ ಮಾಡಲಾದ ಫಲಾನುಭವಿಗಳಿಗೆ ಬ್ಯಾಂಕುಗಳು ಸಾಲ ನೀಡಿರುವ ಬಗ್ಗೆ ಹಾಗೂ ಯೋಜನೆಯ ಅನುಷ್ಠಾನದ ಬಗ್ಗೆ ಆಗ್ಗಿಂದಾಗೆ ಪ್ರಗತಿ ಪರಿಶೀಲನ ಸಭೆ ನಡೆಸುವುದು ಹಾಗೂ ಯೋಜನೆಯ ಮೇಲ್ವಿಚಾರಣೆ ನಡೆಸುವುದು.
6. ಪ್ರತೀ ವರ್ಷ ಅಕ್ಟೋಬರ್ ಮಾಹೆಯ ಅಂತ್ಯದೊಳಗೆ ಫಲಾನುಭವಿಗಳ ಆಯ್ಕೆ ಪ್ರಕ್ರಿಯೆಯನ್ನು ಪೂರ್ಣಗೊಳಿಸುವುದು.
7. ಆಧಾರ ಯೋಜನೆಯ ಮಾಸಿಕ ಪ್ರಗತಿ ವರದಿಯನ್ನು ಅನುಬಂಧ-3ರ ನಮೂನೆಯಲ್ಲಿ ಪ್ರತೀ ತಿಂಗಳ 5ನೇ ತಾರೀಖಿನೊಳಗೆ ತಪ್ಪದೇ ನಿರ್ದೇಶನಾಲಯಕ್ಕೆ ಸಲ್ಲಿಸುವುದು.
8. ಆಧಾರ ಯೋಜನೆಯ ಫಲಾನುಭವಿಗಳನ್ನು ಗುರುತಿಸುವ ದೃಷ್ಟಿಯಿಂದ ಉದ್ಯಮ/ವ್ಯಾಪಾರ ವಹಿವಾಟು ನಡೆಸುವ ಜಾಗದಲ್ಲಿ "ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯ ಆಧಾರ ಯೋಜನೆಯಡಿ ಕೈಗೊಳ್ಳಲಾಗಿದೆ" ಎಂಬ ನಾಮ ಫಲಕವನ್ನು ಕಡ್ಡಾಯವಾಗಿ ಹಾಕಿಸುವುದು.
9. ಈ ಯೋಜನೆಯಡಿ ಸಹಾಯ ಪಡೆದ ಫಲಾನುಭವಿಗಳನ್ನು ಪ್ರತಿ 6 ತಿಂಗಳಿಗೊಮ್ಮೆ ಗ್ರಾಮೀಣ ಪುನರ್ವಸತಿ ಕಾರ್ಯಕರ್ತರು ಹಾಗೂ ವಿವಿಧೋದ್ದೇಶ ಪುನರ್ವಸತಿ ಕಾರ್ಯಕರ್ತರ ಸಹಾಯ ಪಡೆದು ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳ ನೇತೃತ್ವದಲ್ಲಿ ಸಭೆ ಕರೆದು ಫಲಾನುಭವಿಗಳಿಗೆ ಬ್ಯಾಂಕುಗಳಿಂದ ಸಾಲ ವಿತರಣೆಯಲ್ಲಿ ಆಗಿರಬಹುದಾದ ವಿಳಂಬಕ್ಕೆ ಸಂಬಂಧಪಟ್ಟಂತೆ ಅಥವಾ ಸಾಲ ಮರುಪಾವತಿಗೆ ಸಂಬಂಧಪಟ್ಟಂತೆ ಸಮಸ್ಯೆಗಳಿದ್ದಲ್ಲಿ ಸಂಬಂಧಪಟ್ಟ ಬ್ಯಾಂಕುಗಳ ಪ್ರತಿನಿಧಿಗಳನ್ನು ಸದರಿ ಸಭೆಗೆ ಆಹ್ವಾನಿಸಿ ಚರ್ಚಿಸಿ ಪರಿಹಾರ ಕಂಡುಕೊಳ್ಳುವುದು.

ಆಧಾರ ಯೋಜನೆಯಡಿ ಸಾಲ ಸೌಲಭ್ಯ ಪಡೆದು ಯಶಸ್ವಿಯಾದ ವಿಕಲಚೇತನ ಫಲಾನುಭವಿಗಳ ಯಶೋಗಾಥೆಯನ್ನು ಇಲಾಖೆಗೆ ವರದಿ ಮೂಲಕ ಸಲ್ಲಿಸುವುದು.

<u>ಆಧಾರ ಯೋಜನೆಯಡಿ ಸಹಾಯಧನವನ್ನು ಮಂಜೂರು ಮಾಡುವಾಗ ಈ ಕೆಳಕಾಣಿಸಿದಂತೆ ಸೂಚನೆಯನ್ನು ಪಾಲಿಸತಕ್ಕದ್ದು:</u>

1. ಬ್ಯಾಂಕುಗಳು ಮಂಜೂರು ಮಾಡಿ ಬಿಡುಗಡೆ ಮಾಡುವ ಸಾಲದ ಮೊತ್ತಕ್ಕೆ ಅನುಗುಣವಾಗಿ ವಿಕಲಚೇತನರಿಗೆ ಸಹಾಯಧನವನ್ನು ಯೋಜನಾ ವೆಚ್ಚದ ಶೇ.50 ರಷ್ಟು ಅಥವಾ ಗರಿಷ್ಠ ರೂ.50,000/-ಕ್ಕೆ ಮೀರದಂತೆ ಸಹಾಯಧನ ಬಿಡುಗಡೆ ಮಾಡುವ ಬಗ್ಗೆ ಖಾತರಿಪಡಿಸಿಕೊಳ್ಳತಕ್ಕದ್ದು. ಬ್ಯಾಂಕಿನವರು ಸಹಾಯಧನವನ್ನು ಆಧಾರ ಯೋಜನೆಯ Backend Subsidy ಎಂದು ಪರಿಗಣಿಸುವುದು. ಬ್ಯಾಂಕ್‌ನವರು ಸಾಲದ ಮಂಜೂರಾತಿ ಮಾಡಿದ ಬಗ್ಗೆ ಆದೇಶವನ್ನು ನೀಡಿ ಸಾಲದ ಮರುಪಾವತಿಯನ್ನು 36 ಮಾಸಿಕ ಕಂತುಗಳಲ್ಲಿ ಬ್ಯಾಂಕ್ ನಿಗದಿಪಡಿಸಿದ ಬಡ್ಡಿ ಸಮೇತವಾಗಿ ವಸೂಲಿ ಮಾಡತಕ್ಕದ್ದು.

2. ಬ್ಯಾಂಕುಗಳಿಂದ ಸಾಲ ಮಂಜೂರಾದ ನಂತರ ಸಾಲ ಬಿಡುಗಡೆಯಾಗುವ ಮುನ್ನಾ ಆಯ್ಕೆಯಾದ ಫಲಾನುಭವಿಗಳಿಗೆ ಆಯಾ ಜಿಲ್ಲೆಯ ಲೀಡ್ ಬ್ಯಾಂಕ್/ಇನ್ನಿತರ ಬ್ಯಾಂಕ್/ರೂಡ್‌ಸೆಟ್ ತರಬೇತಿ ಕೇಂದ್ರಗಳ ಮೂಲಕ ಮೂರು ದಿನಗಳ ಉದ್ಯಮಶೀಲತಾ ಅಭಿವೃದ್ಧಿ ತರಬೇತಿಯನ್ನು ಕೊಡಿಸುವುದು. ಈ ತರಬೇತಿಯು ಕಡ್ಡಾಯವಾಗಿ ಆದ ನಂತರವೇ ಸಾಲ/ಸಹಾಯಧನ ಬಿಡುಗಡೆಯಾಗುವಂತೆ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು ಜಾಗ್ರತಿ ವಹಿಸತಕ್ಕದ್ದು. ಬುದ್ಧಿಮಾಂದ್ಯತೆ/ ಬಹುವಿಧ ಅಂಗವಿಕಲರು/ ಶ್ರವಣದೋಷವುಳ್ಳವರು/ ತರಬೇತಿ ಪಡೆಯಲು ಅಸಕ್ತರಾಗಿರುವ ವಿಕಲಚೇತನ ರೊಂದಿಗೆ ಅವರ ಪೋಷಕರು ಸಹ ತರಬೇತಿಗೆ ಹಾಜರಾಗತಕ್ಕದ್ದು.
3. ಫಲಾನುಭವಿಯು ಯಾವ ಉದ್ದೇಶಕ್ಕೆ ಸಾಲ ಪಡೆದಿರುತ್ತಾರೋ ಅದೇ ಉದ್ದೇಶಕ್ಕೆ ಸಾಲವನ್ನು ಉಪಯೋಗಿಸಿಕೊಂಡಿರುವರೇ ಎಂಬ ಬಗ್ಗೆ ಗ್ರಾಮೀಣ ಪುನರ್ವಸತಿ ಕಾರ್ಯಕರ್ತರು ಹಾಗೂ ವಿವಿದೋದ್ದೇಶ ಪುನರ್ವಸತಿ ಕಾರ್ಯಕರ್ತರ ಸಹಾಯ ಪಡೆದು ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು ತಪಾಸಣೆ ನಡೆಸಿ ಖಾತರಿಪಡಿಸಿಕೊಳ್ಳತಕ್ಕದ್ದು.
4. ಸಾಲ ಹಾಗೂ ಸಹಾಯಧನವನ್ನು ಫಲಾನುಭವಿಗೆ ಬಿಡುಗಡೆ ಮಾಡಿದ ಬಗ್ಗೆ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು ಸಹಾಯಧನ ಉಪಯುಕ್ತತಾ ಪ್ರಮಾಣ ಪತ್ರವನ್ನು ಬ್ಯಾಂಕುಗಳಿಂದ ಪಡೆಯುವುದು. ಪಡೆದಂತಹ ಉಪಯುಕ್ತತಾ ಪ್ರಮಾಣ ಪತ್ರಗಳನ್ನು ಆಗಿಂದಾಗೆ ತಪ್ಪದೇ ನಿರ್ದೇಶನಾಲಯದ ಕಛೇರಿಗೆ ಸಲ್ಲಿಸತಕ್ಕದ್ದು.
5. ಸಾಲ ಮಂಜೂರು ಮಾಡಿರುವ ಎಲ್ಲಾ ಆಧಾರ ಫಲಾನುಭವಿಗಳ ಬಗ್ಗೆ ಬ್ಯಾಂಕುಗಳ ಕ್ಷೇತ್ರಾಧಿಕಾರಿಗಳು ಸ್ಥಳ ತಪಾಸಣೆ ಮಾಡಿ ಸ್ವಯಂ ಉದ್ಯೋಗ ಕೈಗೊಂಡು, ಸಾಲವನ್ನು ಸದುಪಯೋಗ ಪಡಿಸಿಕೊಂಡಿರುವ ಬಗ್ಗೆ ನೀಡಿರುವ ವಿವರಗಳನ್ನು ಮತ್ತೊಮ್ಮೆ ಪರಿಶೀಲಿಸಿ ಖಚಿತ ಪಡಿಸಿಕೊಂಡು ಉಪ ನಿರ್ದೇಶಕರು / ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು ಕ್ರೋಢೀಕರಿಸಿ ನಿರ್ದೇಶನಾಲಯಕ್ಕೆ ತ್ರೈಮಾಸಿಕ ವರದಿ ಸಲ್ಲಿಸತಕ್ಕದ್ದು.
6. ಸಾಲದ ಮೊತ್ತವನ್ನು ದುರುಪಯೋಗಪಡಿಸಿಕೊಂಡಿದ್ದಲ್ಲಿ ಬ್ಯಾಂಕ್ ಅಧಿಕಾರಿಗಳೊಂದಿಗೆ ಸಹಕರಿಸಿ ಸಾಲದ ಮೊತ್ತವನ್ನು ವಸೂಲು ಮಾಡಲು ಸೂಕ್ತ ಕ್ರಮಗಳನ್ನು ಕೈಗೊಳ್ಳತಕ್ಕದ್ದು.
7. ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು ಈ ಯೋಜನೆಯನ್ನು ನಿಯಮಾನುಸಾರ ಸಮರ್ಪಕ ರೀತಿಯಲ್ಲಿ ಅನುಷ್ಠಾನಗೊಳಿಸುವಲ್ಲಿ ವೈಯಕ್ತಿಕ ಹೊಣೆಗಾರರಾಗಿರುತ್ತಾರೆ.
8. ಅಭ್ಯರ್ಥಿಗಳನ್ನು ಆಯ್ಕೆ ಮಾಡುವಾಗ ಶೇಕಡ.18ರಷ್ಟು ಪ.ಜಾತಿ, ಶೇ.7ರಷ್ಟು ಪ.ವರ್ಗದ ಹಾಗೂ ಒಟ್ಟು ಫಲಾನುಭವಿಗಳಲ್ಲಿ ಮೂರನೇ ಒಂದು ಭಾಗದಷ್ಟು ಮಹಿಳಾ ಅಭ್ಯರ್ಥಿಗಳನ್ನು ಆಯ್ಕೆ ಮಾಡಬೇಕು.
9. ಅಂಗವೈಕಲ್ಯತೆಯ ಪ್ರಮಾಣ ಹೆಚ್ಚಿರುವವರಿಗೆ ಆದ್ಯತೆ ನೀಡತಕ್ಕದ್ದು
10. ಸಾಲದ ಅರ್ಜಿಯನ್ನು ಆನ್‌ಲೈನ್ ಮೂಲಕ ಅಥವಾ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳ ಕಛೇರಿಯಿಂದ ಪಡೆಯುವುದು.

M. Rajanna

(ಎಂ. ರಾಜಣ್ಣ)
ಸರ್ಕಾರದ ಅಧೀನ ಕಾರ್ಯದರ್ಶಿ-2,
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ

## ಆಧಾರ ಯೋಜನೆಯಡಿಯಲ್ಲಿ ಸಾಲ ಮಂಜೂರಾತಿಗಾಗಿ ಅರ್ಜಿ ನಮೂನೆ

ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು

:____________________ಜಿಲ್ಲೆ

| ಕ್ರ.ಸಂ | ವಿವರ | |
|---|---|---|
| 1 | ವಿಕಲಚೇತನರ ಹೆಸರು | |
| 2 | ತಂದೆಯ/ಪೋಷಕರ ಹೆಸರು | |
| 3 | ಪುರುಷ/ಮಹಿಳೆ | |
| 4 | ವಿದ್ಯಾರ್ಹತೆ | |
| 5 | ಹುಟ್ಟಿದ ದಿನಾಂಕ/ವಯಸ್ಸು | |
| 6 | ವಿಳಾಸ | |
| 7 | ಕಳೆದ 10 ವರ್ಷಗಳಿಂದ ಕರ್ನಾಟಕದಲ್ಲಿ ವಾಸವಾಗಿರುವ ಬಗ್ಗೆ ಸಕ್ಷಮ ಪ್ರಾಧಿಕಾರದಿಂದ ಪ್ರಮಾಣ ಪತ್ರ | |
| 8 | ಸರ್ಕಾರಿ ಅಥವಾ ಖಾಸಗಿ ಉದ್ಯೋಗದಲ್ಲಿಲ್ಲದಿರುವ ಬಗ್ಗೆ ಸ್ವಯಂ ಘೋಷಣಾ ಪತ್ರ | |
| 9 | ಕೈಗೊಳ್ಳಲಿರುವ ಸ್ವಯಂ ಉದ್ಯೋಗದ ವಿವರ | |
| 10 | ಕೈಗೊಳ್ಳಲಿರುವ ಸ್ವಯಂ ಉದ್ಯೋಗದ ಯೋಜನಾ ವರದಿ ಲಗತ್ತಿಸಿದೆಯೆ? | |
| 11 | ಅಂಗವಿಕಲತೆ ಸ್ವರೂಪ ಮತ್ತು ಪ್ರಮಾಣ(ಇಲಾಖೆಯಿಂದ ಪಡೆದಿರುವ ಗುರುತಿನ ಚೀಟಿ ಪ್ರತಿ ಲಗತ್ತಿಸಿರಬೇಕು) | |
| 12 | ವಾರ್ಷಿಕ ಆದಾಯ | |
| 13 | ವಾರ್ಷಿಕ ಆದಾಯದ ಪ್ರಮಾಣ ಪತ್ರ ಲಗತ್ತಿಸಲಾಗಿದೆಯೇ? | |
| 14 | ಉದ್ದೇಶಿತ ಸ್ವಯಂ ಉದ್ಯೋಗ ಕ್ಷೇತ್ರದಲ್ಲಿ ಅನುಭವದ ಬಗ್ಗೆ ವಿವರಣೆ/ದಾಖಲೆಗಳು | |

ಸ್ಥಳ:

ದಿನಾಂಕ:

ಅಭ್ಯರ್ಥಿಯ ಸಹಿ

## ಅನುಬಂಧ-1

ಆಧಾರ ಯೋಜನೆಯಡಿ ಕೈಗೆತ್ತಿಕೊಳ್ಳಬಹುದಾದ ಚಟುವಟಿಕೆಗಳ ಪಟ್ಟಿ (ಈ ಪಟ್ಟಿ ಕೇವಲ ನಿದರ್ಶನವಾಗಿದೆ)

1. ನೋಟ್‌ಬುಕ್ ತಯಾರಿಕೆ ಮತ್ತು ಬುಕ್ ಬೈಂಡಿಂಗ್
2. ಸೀಮೆ ಸುಣ್ಣ ತಯಾರಿಕೆ
3. ಹಪ್ಪಳ ತಯಾರಿಕೆ
4. ಜಾಮ್, ಜೆಲ್ಲಿ ಮತ್ತು ಉಪ್ಪಿನಕಾಯಿ ತಯಾರಿಕೆ
5. ಜರಿ ಮತ್ತು ಎಂಬ್ರಾಯಡರಿ
6. ಉಣ್ಣೆ ಕಂಬಳಿ ನೇಯ್ಗೆ
7. ಸೀರೆಗೆ ಬಣ್ಣ ಹಾಕುವುದು (ಪ್ರಿಂಟಿಂಗ್ ಮತ್ತು ಡೈಯಿಂಗ್)
8. ಬೆಡ್ ಶೀಟ್ ಮತ್ತು ಟವೆಲ್ ತಯಾರಿಕೆ
9. ರೇಷ್ಮೆ ನೇಯ್ಗೆ
10. ಟೇಪು (ರಿಬ್ಬನ್ ತಯಾರಿಕೆ)
11. ಬೇಕರಿ
12. ಒಣಮೀನು ತಯಾರಿಕೆ
13. ಹೈನುಗಾರಿಕೆ
14. ಕೋಳಿ ಸಾಕಾಣಿಕೆ
15. ಬಾತುಕೋಳಿ ಸಾಕಾಣಿಕೆ
16. ಮಾಂಸದ ಅಂಗಡಿ
17. ಚಪ್ಪಲಿ ತಯಾರಿಸುವ ಕಚ್ಚಾ ಸಾಮಗ್ರಿಗಳ ಅಂಗಡಿ
18. ಚಪ್ಪಲಿ ಮಾರಾಟ ಅಂಗಡಿ
19. ವೀಡಿಯೋ ಪಾರ್ಲರ್
20. ಹೊಲಿಗೆ ಅಂಗಡಿ
21. ಸಿದ್ಧ ಉಡುಪು ಅಂಗಡಿ
22. ಹೂ ಮತ್ತು ಬೊಕ್ಕೆಗಳ ಅಂಗಡಿ
23. ಚಾಪೆ ಹೆಣಿಗೆ ಅಂಗಡಿ
24. ಅಡಿಕೆ ಪಟ್ಟೆ: ಎಲೆಯಿಂದ ದೊನ್ನೆ ಮತ್ತು ತಟ್ಟೆ ತಯಾರಿಕೆ
25. ಸೀಗೆಕಾಯಿ ಪೌಡರ್ ತಯಾರಿಕೆ
26. ಹಿಟ್ಟಿನ ಗಿರಣಿ
27. ಒಳ ಅಂಗಿ : ಸಾಕ್ಸ್: ಸ್ವೆಟರ್ಸ್: ಮಫ್ಲರ್ಸ್ ತಯಾರಿಕೆ
28. ಉಣ್ಣೆ ಉಡುಪುಗಳು
29. ಹಳೇ ಪೇಪರ್‌ನಿಂದ ಕವರ್, ಬ್ಯಾಗ್ ತಯಾರಿಕೆ
30. ಕಾಪಿ ಪುಡಿ ತಯಾರಿಕೆ
31. ಟ್ಯುಟೋರಿಯಲ್
32. ಹೊಲಿಗೆ ತರಬೇತಿ ಕೇಂದ್ರ
33. ಬೆತ್ತ ಮತ್ತು ಬಿದಿರು ಅಂಗಡಿ
34. ಜಾಬ್ ಟೈಪಿಂಗ್ ಮತ್ತು ಜೆರಾಕ್ಸ್
35. ಬ್ಯುಟೀಶಿಯನ್
36. ಶಾವಿಗೆ ತಯಾರಿಕೆ
37. ಕರುಗೇಟೆಡ್ ಬಾಕ್ಸ್ ತಯಾರಿಕೆ
38. ಜೂಟ್ ಕಾರ್ಪೆಟ್ ತಯಾರಿಕೆ
39. ಮಡಿಕೆ ಮತ್ತು ಕರಕುಶಲ ವಸ್ತುಗಳು
40. ಮೀನು ಅಂಗಡಿ
41. ನಾರಿನ ಚಾಪೆ ತಯಾರಿಕೆ
42. ಅಗರಬತ್ತಿ ತಯಾರಿಕೆ
43. ರಾಗಿ ಮತ್ತು ಹುರಿ ಹಿಟ್ಟು ತಯಾರಿಕೆ
44. ಶಕ್ತಿಯುತಯುಳ್ಳ ಆಹಾರ ವಸ್ತುಗಳ ತಯಾರಿಕೆ
45. ಕ್ವಿಲ್ಟ್ ಮತ್ತು ಹಾಸಿಗೆ ತಯಾರಿಕೆ
46. ಟ್ರಾವೆಲ್ ಏಜೆನ್ಸಿ
47. ತಿಂಡಿ ತಿನಿಸುಗಳ ಕೇಂದ್ರ
48. ಹಳೇ ಪೇಪರ್ ಹಾಗೂ ಹಳೆ ವಸ್ತುಗಳ ಮಾರಾಟ
49. ಸೆಕ್ಯೂರಿಟಿ ಸರ್ವೀಸ್
50. ಎಳನೀರು ವ್ಯಾಪಾರ
51. ಚಪ್ಪಲಿ ತಯಾರಿಕೆ
52. ರೇಷ್ಮೆ ಹುಳು ಸಾಕಾಣಿಕೆ
53. ಹಿಟ್ಟು ರುಬ್ಬುವ ಯಂತ್ರ
54. ಹಣ್ಣು ಮತ್ತು ತರಕಾರಿ ಅಂಗಡಿ
55. ತರಕಾರಿ ಅಂಗಡಿ
56. ಅಣಬೆ ಬೇಸಾಯ
57. ಕಿರಾಣಿ ಅಂಗಡಿ
58. ಬೆಣ್ಣೆ ತುಪ್ಪ ಮಾರಾಟ ಅಂಗಡಿ
59. ಲೇಖನ ಸಾಮಗ್ರಿ ಅಂಗಡಿ
60. ಗಿಫ್ಟ್ ಆರ್ಟಿಕಲ್ಸ್, ಫ್ಯಾನ್ಸಿ ಸ್ಟೋರ್ಸ್

61. ಬಳೆ ಮತ್ತು ಸೌಂದರ್ಯೋಪಯೋಗಿ ವಸ್ತುಗಳ ಅಂಗಡಿ
62. ಹಣ್ಣು ಮತ್ತು ಹೂವಿನ ಅಂಗಡಿ
63. ತಿಂಡಿ ಮತ್ತು ಊಟ ಸರಬರಾಜು
64. ಇಸ್ತ್ರೀ ಅಂಗಡಿ ಮತ್ತು ಡ್ರೈ ಕ್ಲೀನಿಂಗ್
65. ಕಟ್‌ಪೀಸ್ ಅಂಗಡಿ (ಬಟ್ಟೆ ಅಂಗಡಿ)
66. ದಿನ ಪತ್ರಿಕೆ : ವಾರ ಪತ್ರಿಕೆ : ಮಾಸ ಪತ್ರಿಕೆ ಮಾರಾಟ
67. ಕರಕುಶಲ ವಸ್ತುಗಳ ಮಾರಾಟ
68. ಎಣ್ಣೆ ಅಂಗಡಿ (Edible Oil Shop)
69. ಚಹ ಅಂಗಡಿ
70. ಸೌದೆ ಅಂಗಡಿ
71. ರೋಗ ತಪಾಸಣಾ ಕೇಂದ (Diagnostic Lab)
72. ಬೆರಳಚ್ಚು ತರಬೇತಿ ಕೇಂದ್ರ
73. ರೇಷ್ಮೆದಾರ ತಯಾರಿಕೆ
74. ವೀಳ್ಯೆದೆಲೆ ಮಾರಾಟ
75. ಹಾಲಿನ ಕೇಂದ್ರ
76. ಬಾಟಲಿ ಮುಚ್ಚಳ ತಯಾರಿಕೆ
77. ಉಪ್ಪಿನ ಕಾಯಿ/ಮುರಬ್ಬ ತಯಾರಿಕೆ
78. ಇಂಕು ತಯಾರಿಕೆ
79. ಸಿದ್ಧ ತಿಂಡಿ–ತಿನಿಸು ಅಂಗಡಿ (Fast Food restaurant)
80. ಫಿನಾಯಿಲ್, ನ್ಯಾಪ್ತಲಿನ್ ಬಾಲ್ ತಯಾರಿಕೆ
81. ಸೋಪ್ ಆಯಿಲ್, ಸೋಪ್ ಪೌಡರ್, ಡಿಟರ್ಜೆಂಟ್ ತಯಾರಿಕೆ
82. ಕ್ಲೀನಿಂಗ್ ಪೌಡರ್
83. ವ್ಯಾಕ್ಸ್ ಪೇಪರ್ ತಯಾರಿಕೆ
84. ಹತ್ತಿದಾರ ತಯಾರಿಕೆ
85. ನೈಲಾನ್ ಗುಂಡಿ ತಯಾರಿಕೆ
86. ಬಾಳೆ ಎಲೆ ವ್ಯಾಪಾರ
87. ಆಡಿಯೋ ಮತ್ತು ವೀಡಿಯೋ ಕ್ಯಾಸೆಟ್ ವ್ಯಾಪಾರ
88. ರೇಡಿಯೋ ಮತ್ತು ಟಿ.ವಿ. ರಿಪೇರ್ ಮತ್ತು ಸರ್ವೀಸಿಂಗ್
89. ಗೃಹೋಪಯೋಗಿ ಉಪಕರಣಗಳ ರಿಪೇರಿ ಮತ್ತು ಮಾರಾಟ ಅಂಗಡಿ
90. ಗ್ರಂಥಾಲಯ
91. ಸ್ವೀಟ್ಸ್ ಮತ್ತು ಕಾಂಡಿಮೆಂಟ್ಸ್ ಅಂಗಡಿ
92. ಐಸ್‌ಕ್ರೀಮ್ ಅಂಗಡಿ
93. ಪಾನಿಪುರಿ ಅಥವಾ ಬೋಂಡ, ಬಜ್ಜಿ ಅಂಗಡಿ
94. ಫೋಟೋ ಸ್ಟುಡಿಯೊ

ಈ ಮೇಲ್ಕಂಡ ಚಟುವಟಿಕೆಗಳಲ್ಲದೇ ಇನ್ನಾವುದೇ ಲಾಭದಾಯಕರವಾದ ವ್ಯಾಪಾರ, ಉದ್ಯಮ ಈ ಯೋಜನೆಯಡಿ ಸ್ಥಾಪಿಸಲು ಅವಕಾಶವಿರುತ್ತದೆ.

(ಎಂ. ರಾಜಣ್ಣ)
ಸರ್ಕಾರದ ಅಧೀನ ಕಾರ್ಯದರ್ಶಿ–2,
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ

ಅನುಬಂಧ–2

ಆಧಾರ ಅರ್ಜಿಗಳನ್ನು ಪರಿಶೀಲಿಸುವಾಗ ಗಮನಿಸಬೇಕಾದ ಅಂಶಗಳು

1. ಅರ್ಜಿದಾರರ ವಯಸ್ಸು 18 ರಿಂದ 55.
2. ವಿಕಲಚೇತನರ ಗುರುತಿನ ಚೀಟಿ.
3. ಆದಾಯ ಮಿತಿ – ವಿಕಲಚೇತನರು ಬಡತನ ರೇಖೆಗಿಂತ ಕೆಳಗಿರುವ ಕುಟುಂಬಕ್ಕೆ ಸೇರಿದವರಿರಬೇಕು ಹಾಗೂ ಇದಕ್ಕೆ ಸಂಬಂಧಪಟ್ಟಂತೆ ಆದಾಯ ಪ್ರಮಾಣ ಪತ್ರ/ಬಿ.ಪಿ.ಎಲ್ ಕಾರ್ಡ್‌ನ್ನು ಸಲ್ಲಿಸುವುದು.
4. ಅರ್ಜಿದಾರರು ಕೈಗೊಳ್ಳಬಹುದಾದ ವ್ಯಾಪಾರ, ಉದ್ಯಮ ಈಗಾಗಲೇ ಅಸ್ತಿತ್ವದಲ್ಲಿದೆಯೇ? ಅಥವಾ ಹೊಸತಾಗಿ ಪ್ರಾರಂಭಿಸಲಿರುವರೇ? ಎಂಬ ಬಗ್ಗೆ ಖಚಿತಪಡಿಸಿಕೊಳ್ಳುವುದು.
5. ಅರ್ಜಿದಾರರು ಈ ಕೆಳಕಾಣಿಸಿದ ದಾಖಲಾತಿಗಳೊಂದಿಗೆ ಅರ್ಜಿಯನ್ನು ಸಲ್ಲಿಸಿರಬೇಕು
   ಅ. ಇತ್ತೀಚಿನ ಭಾವಚಿತ್ರ,
   ಆ. ಆದಾಯ ಪ್ರಮಾಣ ಪತ್ರ/ಬಿಪಿಎಲ್ ಕಾರ್ಡ್ ಅನ್ನು ಸಾಮಾನ್ಯ ವರ್ಗ; ಎಸ್.ಸಿ;ಎಸ್.ಟಿ ಪಂಗಡದವರು ಸಂಬಂಧಪಟ್ಟ ತಹಶೀಲ್ದಾರರಿಂದ ದೃಢೀಕರಿಸಿ ಸಲ್ಲಿಸತಕ್ಕದ್ದು.
   ಇ. ಅಭ್ಯರ್ಥಿಯು ಕೈಗೊಳ್ಳಬಹುದಾದ ಉದ್ದಿಮೆ: ವ್ಯಾಪಾರಗಳ ಬಗ್ಗೆ ಯೋಜನಾ ವರದಿಯನ್ನು ಸಲ್ಲಿಸಿರತಕ್ಕದ್ದು.

M. Rajanna

(ಎಂ. ರಾಜಣ್ಣ)
ಸರ್ಕಾರದ ಅಧೀನ ಕಾರ್ಯದರ್ಶಿ–2,
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ

ಅನುಬಂಧ-3

## ಆಧಾರ ಯೋಜನೆಯಡಿ ಮಾಸಿಕ ಪ್ರಗತಿ ವರದಿ

ಜಿಲ್ಲೆಗಳ ಹೆಸರು:

| ಕ್ರ ಸಂ | ಫಲಾನುಭವಿಗಳ ಹೆಸರು | ವಿಳಾಸ | ಕೈಗೊಂಡಿರುವ ಚಟುವಟಿಕೆ | ಬ್ಯಾಂಕ್‌ನ ಸಾಲದ ಮೊತ್ತ | ಸರ್ಕಾರದಿಂದ ನೀಡಿದ ಸಹಾಯಧನ ಮೊತ್ತ | ಮರು ಪಾವತಿಸಬೇಕಾದ ಸಾಲದ ಮೊತ್ತ ಬಡ್ಡಿ ಸಮೇತ | ಷರಾ |
|---|---|---|---|---|---|---|---|
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | | | | | | | |

(ಎಂ. ರಾಜಣ್ಣ)
ಸರ್ಕಾರದ ಅಧೀನ ಕಾರ್ಯದರ್ಶಿ-2,
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ

20

58/ ...
9/6/14

# ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಅಂಗವಿಕಲತೆ ನಿವಾರಣಾ ವೈದ್ಯಕೀಯ ಪರಿಹಾರ ನಿಧಿ ಯೋಜನೆಯಡಿ ನೀಡುತ್ತಿರುವ ಸಹಾಯಧನವನ್ನು ಪರಿಷ್ಕರಿಸುವ ಬಗ್ಗೆ.

ಓದಲಾಗಿದೆ: 1) ಸರ್ಕಾರದ ಆದೇಶ ಸಂಖ್ಯೆ:ಮಮಇ 199 ಪಿಹೆಚ್‌ಪಿ 2008(5), ದಿನಾಂಕ: 15.9.2008.

2) ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರ ಪತ್ರ ಸಂಖ್ಯೆ:ವಿಹಿನಾಸಇ:ಹೊಸ ಯೋಜನೆ:ವೈ.ಪ.ನಿಧಿ:24:2014-15:141, ದಿನಾಂಕ: 3.4.2014.

ಪ್ರಸ್ತಾವನೆ:

ಅಂಗವಿಕಲತೆ ನಿವಾರಣಾ ವೈದ್ಯಕೀಯ ಪರಿಹಾರ ನಿಧಿ ಯೋಜನೆಯಡಿ ಅಂಗವಿಕಲರು ಶಸ್ತ್ರಚಿಕಿತ್ಸೆ ಮಾಡಿಸಿಕೊಳ್ಳಲು ರೂ.35,000/- ಗಳ ಸಹಾಯಧನವನ್ನು ನೀಡಲು ಮೇಲೆ ಕ್ರಸಂ. (1) ರಲ್ಲಿ ಓದಲಾದ ದಿನಾಂಕ: 15.9.2008 ರ ಆದೇಶದಲ್ಲಿ ಮಂಜೂರಾತಿ ನೀಡಲಾಗಿತ್ತು.

2014-15ನೇ ಸಾಲಿನ ಆಯವ್ಯಯದಲ್ಲಿ ಶಸ್ತ್ರಚಿಕಿತ್ಸೆಯ ಮೂಲಕ ವಿಕಲಚೇತನತೆಯನ್ನು ನಿವಾರಣೆ ಮಾಡಲು ಹಾಲಿ ನೀಡುತ್ತಿರುವ ರೂ.35,000/- ಗಳ ಅನುದಾನವನ್ನು ರೂ.1.00 ಲಕ್ಷಗಳಿಗೆ ಹೆಚ್ಚಿಸಲು ಘೋಷಿಸಲಾಗಿದೆ. ಈ ಯೋಜನೆಯಡಿ ಶಸ್ತ್ರಚಿಕಿತ್ಸೆ ವೆಚ್ಚ, ಔಷಧಿ ವೆಚ್ಚ, ವೈದ್ಯಕೀಯ ಪರೀಕ್ಷೆಗಳ ವೆಚ್ಚ, ಬೆಡ್‌ಚಾರ್ಜ್‌ಗಳ ಮೊತ್ತ ಭರಿಸಲು ಹಾಲಿ ಇರುವ ರೂ.35,000/- ಗಳಿಂದ ಗರಿಷ್ಠ ರೂ.1.00 ಲಕ್ಷಗಳಿಗೆ ಹೆಚ್ಚಿಸಲು 2014-15ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 2235-02-101-0-99 ಯೋಜನೆ ಉಪ ಲೆಕ್ಕಶೀರ್ಷಿಕೆ 100 ರ ಧನಸಹಾಯ/ ಪರಿಹಾರ ನಿಧಿ ಅಡಿಯಲ್ಲಿ ರೂ.1012.50 ಲಕ್ಷಗಳ ಆಯವ್ಯಯದಲ್ಲಿ ವಿಕಲಚೇತನತೆಯನ್ನು ನಿವಾರಣೆ ಮಾಡಲು ವೈದ್ಯಕೀಯ ಪರಿಹಾರ ನಿಧಿಯನ್ನು ಒದಗಿಸುವ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರು ಮೇಲೆ ಓದಲಾದ ಕ್ರಸಂ.(2) ರ ದಿನಾಂಕ: 3.4.2014 ರ ಪತ್ರದಲ್ಲಿ ಕೋರಿರುತ್ತಾರೆ.

10/6/14

ಮೇಲಿನ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 114 ಪಿಎಚ್‌ಪಿ 2014, ಬೆಂಗಳೂರು, ದಿನಾಂಕ: 7.6.2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಅಂಗವಿಕಲತೆ ನಿವಾರಣಾ ವೈದ್ಯಕೀಯ ಪರಿಹಾರ ನಿಧಿ ಯೋಜನೆಯಡಿ ಶಸ್ತ್ರಚಿಕಿತ್ಸೆಯ ಮೂಲಕ ವಿಕಲಚೇತನತೆಯನ್ನು ನಿವಾರಣೆ ಮಾಡಲು ಶಸ್ತ್ರಚಿಕಿತ್ಸೆ ವೆಚ್ಚ, ಔಷಧಿ ವೆಚ್ಚ, ವೈದ್ಯಕೀಯ ಪರೀಕ್ಷೆಗಳ ವೆಚ್ಚ, ಬೆಡ್‌ಚಾರ್ಜ್‌ಗಳನ್ನು




1961

. . . . 2

ಭರಿಸಲು ಪ್ರಸ್ತುತ ನೀಡುತ್ತಿರುವ ರೂ.35,000/- ಗಳ ಅನುದಾನವನ್ನು ರೂ.1.00 ಲಕ್ಷಗಳಿಗೆ ಹೆಚ್ಚಿಸಲು ಸರ್ಕಾರದ ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2235-02-101-0-99 (ಯೋಜನೆ) ರಡಿ ಒದಗಿಸಿರುವ ಅನುದಾನದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಕ್ರಮವಾಗಿ ಆರ್ಥಿಕ ಇಲಾಖೆ, ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 349 ವೆಚ್ಚ-3/2014, ದಿನಾಂಕ: 27.5.2014 ಹಾಗೂ ಪಿಡಿ 15 ಐಎಂಎಂ 2014, ದಿನಾಂಕ: 29.5.2014 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

ಸರ್ಕಾರದ ಅಧೀನ ಕಾರ್ಯದರ್ಶಿ-2
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.
ಹಾಗೂ ವಿಕಲಚೇತನರ ಮತ್ತು ಹಿರಿಯ
ನಾಗರಿಕರ ಸಬಲೀಕರಣ ಇಲಾಖೆ.

ಇವರಿಗೆ:-

1. ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು.
2. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು.
3. ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಬೆಂಗಳೂರು.
4. ಆಂತರಿಕ ಆರ್ಥಿಕ ಸಲಹೆಗಾರರು,ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು.
5. ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವೆಚ್ಚ – 3 & 9).
6. ನಿರ್ದೇಶಕರು, ಯೋಜನಾ ಇಲಾಖೆ (ಪಿ.ಎಂ.ಐ. ವಿಭಾಗ)..
7. ಎಲ್ಲಾ ಜಿಲ್ಲೆಯ ಉಪ ನಿರ್ದೇಶಕರು/ ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ (ನಿರ್ದೇಶಕರ ಮುಖಾಂತರ).
8. ಎಲ್ಲಾ ಜಿಲ್ಲೆಯ ಅಂಗವಿಕಲರ ಕಲ್ಯಾಣಾಧಿಕಾರಿಗಳು, ಉಪ ನಿರ್ದೇಶಕರ ಕಛೇರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ (ನಿರ್ದೇಶಕರ ಮುಖಾಂತರ).
9. ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನಸೌಧ.
10. ಶಾಖಾ ರಕ್ಷಾ ಕಡತ/ ಹೆಚ್ಚುವರಿ ಪ್ರತಿ.

ಯೋಜನೆಗೆ ಸಂಬಂಧಿಸಿದ ಮಾರ್ಗಸೂಚಿಯನ್ನು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧ(1)ರಲ್ಲಿ ನೀಡಲಾಗಿದೆ.

ಈ ಯೋಜನೆಗೆ, 2000-01ನೇ ಸಾಲಿನಲ್ಲಿ, ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ ''2235-02-101-0-45 (ಯೋಜನೆ) ಅಂಗವಿಕಲರಿಗೆ ವೈದ್ಯಕೀಯ ಪರಿಹಾರ ನಿಧಿ'' ಯೋಜನೆ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು, ದಿನಾಂಕ: 31-3-2000ರಂದು ಅಧಿಕಾರಯುಕ್ತ ಸಮಿತಿಯಲ್ಲಿ ತೆಗೆದುಕೊಂಡ ತೀರ್ಮಾನವನ್ನು ಅನುಸರಿಸಿ, ಆರ್ಥಿಕ ಇಲಾಖೆಯು, ದಿ. 17-2-2000ರ ಅಧಿಕೃತ ಟಿಪ್ಪಣಿ ಸಂ. ಆ ಇ. 12-14 ಪ್ರಕ. 2000. ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
(ಹುಲಿಯಪ್ಪ)
ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಅನುಬಂಧ

**ಸರ್ಕಾರಿ ಆದೇಶ ಸಂ.ಮಮಅ:342:ಪಿಹೆಚ್:ದಿ.7-8-2000**

## ಅಂಗವಿಕಲತೆ ನಿವಾರಣಾ ವೈದ್ಯಕೀಯ ಪರಿಹಾರ ನಿಧಿ ಯೋಜನೆ:

**ಪೀಠಿಕೆ:**

ಅಂಗವಿಕಲತೆಯು ಅನೇಕ ಕಾರಣಗಳಿಂದ ಉಂಟಾಗುತ್ತದೆ. ಅಂಗವಿಕಲತೆಯನ್ನು ಸಾಧ್ಯವಾದಷ್ಟು ಮಟ್ಟಿಗೆ ವೈದ್ಯಕೀಯ ಶುಶ್ರೂಷೆ. ಶಸ್ತ್ರ ಚಿಕಿತ್ಸೆ ಮುಂತಾದವುಗಳ ಮುಖಾಂತರ ಗುಣಪಡಿಸಬಹುದು. ಅನೇಕ ಅಂಗವಿಕಲತೆಯುಳ್ಳ ವ್ಯಕ್ತಿಗಳ ವರಮಾನವು ಕಡಿಮೆಯಿದ್ದು ಆರ್ಥಿಕ ಕಾರಣಗಳಿಂದ ವೈದ್ಯಕೀಯ ಸೌಲಭ್ಯವಿಲ್ಲದೆ, ಅಂಗವಿಕಲತೆಯಿಂದ ಬಳಲುತ್ತಿದ್ದಾರೆ. ಇಂತಹ ವ್ಯಕ್ತಿಗಳಿಗೆ ಸಕಾಲದಲ್ಲಿ ವೈದ್ಯಕೀಯ ನೆರವು ನೀಡಿ ಅಂಗವಿಕಲತೆಯನ್ನು ತಡೆಗಟ್ಟುವ ಸಲುವಾಗಿ ಅಂಗವಿಕಲತೆ ನಿವಾರಣಾ ಪರಿಹಾರ ನಿಧಿಯನ್ನು ಸ್ಥಾಪಿಸುವುದು ಅತ್ಯಗತ್ಯವಾಗಿದೆ.

**ಯೋಜನೆಯ ಹೆಸರು:**

ಈ ಯೋಜನೆಯನ್ನು ''ಅಂಗವಿಕಲತೆಯ ನಿವಾರಣಾ ವೈದ್ಯಕೀಯ ಪರಿಹಾರ ನಿಧಿ'' ಎಂದು ಕರೆಯಲಾಗುವುದು.

**ಉದ್ದೇಶ:**

ಈ ಯೋಜನೆಯಡಿ ಈ ಕೆಳಕಂಡ ಅಂಗವಿಕಲತೆಯುಳ್ಳ ವ್ಯಕ್ತಿಗಳಿಗೆ ಶುಶ್ರೂಷೆ ಶಸ್ತ್ರ ಚಿಕಿತ್ಸೆ ಮುಂತಾದುವುಗಳಿಗಾಗಿ ಧನ ಸಹಾಯ ನೀಡಲಾಗುವುದು.

1. ದೈಹಿಕ ಅಂಗವಿಕಲತೆಗಳುಳ್ಳ ವ್ಯಕ್ತಿಗಳು; ಮೂಳೆಗಳು, ಕೀಲುಗಳು ಹಾಗೂ ಮಾಂಸಖಂಡಗಳ ದೋಷದಿಂದಾಗಿ ಅವಯವಗಳ ಚಲನೆಗೆ ತೊಂದರೆಯಾಗುತ್ತಿರುವುದು. ಮಿದುಳಿನ ಪಾರ್ಶ್ವವಾಯುವಿಗೆ ಒಳಗಾಗಿ ಇಲ್ಲವೇ ನರದೌರ್ಬಲ್ಯದಿಂದ ಚಲನೆಗೆ ತೊಂದರೆಯುಂಟಾಗಿರುವುದು. ಅಂಗವಿಕಲತೆಯ ಪ್ರಮಾಣವು ಶೇ.40 ಮತ್ತು ಅದಕ್ಕಿಂತಲೂ ಹೆಚ್ಚಿಗೆ ಇರಬೇಕು.
2. ದೃಷ್ಟಿ ದೋಷವುಳ್ಳ ವ್ಯಕ್ತಿಗಳು: ಪೂರ್ಣವಾಗಿ ದೃಷ್ಟಿ ಶಕ್ತಿ ಇಲ್ಲದಿರುವುದು ಅಥವಾ ಕನ್ನಡಕ ಹಾಕಿಕೊಂಡಾಗಲೂ ದೃಷ್ಟಿ ಶಕ್ತಿ 6:50 ಅಥವಾ 20 ಡಿಗ್ರಿ ಕೋನದಷ್ಟೆ ಕಾಣುತ್ತಿರುವುದು.

3. ಶ್ರವಣ ದೋಷವುಳ್ಳ ವ್ಯಕ್ತಿಗಳು: ಪರಸ್ಪರ ಮಾತನಾಡುವ ಸಂದರ್ಭದಲ್ಲಿ 70 ಡಿಸಿಬಲ್ ಅಥವಾ ಅದಕ್ಕಿಂತಲೂ ಹೆಚ್ಚು ಶ್ರವಣ ಸಾಮರ್ಥ್ಯವನ್ನು ಕಳೆದುಕೊಂಡಿರುವ ವ್ಯಕ್ತಿಗಳು.
4. ಬುದ್ಧಿಮಾಂದ್ಯರು: ಬೆಳವಣಿಗೆಯ ಅವಧಿಯಲ್ಲಿ ಪ್ರಾರಂಭವಾಗಿರುವ ಮತ್ತು ಸನ್ನಿವೇಶಕ್ಕೆ ತಕ್ಕಂತೆ ಹೊಂದಿಕೊಳ್ಳುವ ಸಹಜ ಸ್ವಭಾವದಲ್ಲಿ ದೋಷ ಕಂಡುಬಂದಿದ್ದು ಸಾಮಾನ್ಯ ಬುದ್ಧಿಶಕ್ತಿಯ ಮಟ್ಟ ಸಾಧಾರಣ ಮಟ್ಟಕ್ಕಿಂತಲೂ ಕಡಿಮೆ ಇರುವ ಸ್ಥಿತಿ.
5. ಕುಷ್ಠ ರೋಗ ನಿವಾರಿತ ಅಂಗವಿಕಲರು: ಕುಷ್ಠ ರೋಗದಿಂದ ಅಂಗವಿಕಲರಾದವರು.
6. ಬಹು ಅಂಗವಿಕಲತೆಯುಳ್ಳವರು: ಒಂದಕ್ಕಿಂತ ಹೆಚ್ಚು ಬಗೆಯ ಅಂಗವಿಕಲತೆಯುಳ್ಳವರು.
7. ಮಾನಸಿಕ ಅಸ್ವಸ್ಥರು: ಮಾನಸಿಕವಾಗಿ ಅಸ್ವಸ್ಥತೆಯುಳ್ಳವರು.

ಅನುಷ್ಠಾನ:

ಈ ಯೋಜನೆಯನ್ನು ಸಂಜಯ ಗಾಂಧಿ ಅಪಘಾತ ಆಸ್ಪತ್ರೆ ಮತ್ತು ಸಂಶೋಧನಾ ಸಂಸ್ಥೆ ಬೆಂಗಳೂರು ಮತ್ತು ಎಲ್ಲಾ ಸರ್ಕಾರಿ ಮತ್ತು ಸುಸಜ್ಜಿತ ಖಾಸಗಿ ಆಸ್ಪತ್ರೆಗಳ ಮುಖಾಂತರ ಅನುಷ್ಠಾನಗೊಳಿಸಲಾಗುವುದು.

ಅರ್ಜಿ ಸಲ್ಲಿಸುವ ವಿಧಾನ:

ಈ ಯೋಜನೆಯಡಿಯಲ್ಲಿ ನೆರವು ಕೋರುವ ಅಂಗವಿಕಲತೆಯುಳ್ಳ ವ್ಯಕ್ತಿಗಳು ಅನುಬಂಧ - 1ರ ನಮೂನೆಯಲ್ಲಿ ಅರ್ಜಿಯನ್ನು ತ್ರಿಪ್ರತಿಯಲ್ಲಿ ನಿರ್ದೇಶಕರು, ಅಂಗವಿಕಲರ ಕಲ್ಯಾಣ ಇಲಾಖೆ, ಬೆಂಗಳೂರುರವರಿಗೆ ಸಲ್ಲಿಸಬೇಕು. ಅರ್ಜಿಗೆ ಕುಟುಂಬದ ವಾರ್ಷಿಕ ಪ್ರಮಾಣ ಪತ್ರ, ಅಂಗವಿಕಲತೆಯ ಬಗ್ಗೆ ವೈದ್ಯಕೀಯ ಪ್ರಮಾಣಪತ್ರ, 3 ಭಾವಚಿತ್ರಗಳನ್ನು ಲಗತ್ತಿಸಿರಬೇಕು.

ಅರ್ಜಿಗಳನ್ನು ಪರಿಶೀಲಿಸುವ ವಿಧಾನ:

ಅಂಗವಿಕಲರ ಕಲ್ಯಾಣ ಇಲಾಖೆಗೆ ಈ ಯೋಜನೆಯಡಿ ನೆರವು ಕೋರಿ ಬರುವ ಅರ್ಜಿಗಳನ್ನು ನಿರ್ದೇಶಕರು ಸಂಜಯ ಗಾಂಧಿ ಅಪಘಾತ ಆಸ್ಪತ್ರೆ ಮತ್ತು ಸಂಶೋಧನಾ ಸಂಸ್ಥೆ ಬೆಂಗಳೂರು ಅಥವಾ ಸಂಬಂಧಿಸಿದ ಸರ್ಕಾರಿ ಆಸ್ಪತ್ರೆಯ ಮುಖ್ಯಸ್ಥರಿಗೆ ಪರಿಶೀಲನೆಗಾಗಿ ಕಳುಹಿಸತಕ್ಕದ್ದು. ಆಸ್ಪತ್ರೆಯ ಮುಖ್ಯಸ್ಥರು ಅರ್ಜಿಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಅಗತ್ಯವಿರುವ ಚಿಕಿತ್ಸೆ, ಆಸ್ಪತ್ರೆಯಲ್ಲಿ ದೊರಕುವ ಸೌಲಭ್ಯ ಹಾಗೂ ಔಷಧಗಳ ವೆಚ್ಚವನ್ನು ಹೊರತುಪಡಿಸಿ ತಗಲುವ ವೆಚ್ಚ ಮುಂತಾದವುಗಳೊಂದಿಗೆ ಅರ್ಜಿಯನ್ನು ಧನಸಹಾಯಕ್ಕಾಗಿ ನಿರ್ದೇಶಕರು, ಅಂಗವಿಕಲರ ಕಲ್ಯಾಣ ಇಲಾಖೆ, ಬೆಂಗಳೂರುರವರಿಗೆ ಹಿಂತಿರುಗಿಸತಕ್ಕದ್ದು. ನಿರ್ದೇಶಕರು, ಅಂಗವಿಕಲರ ಕಲ್ಯಾಣ ಇಲಾಖೆ, ಬೆಂಗಳೂರುರವರು ಗರಿಷ್ಠ ರೂ. 15000ಗಳ ಮಿತಿಗೆ ಒಳಪಟ್ಟು ಸಹಾಯಧನವನ್ನು ನಿರ್ದೇಶಕರು, ಸಂಜಯಗಾಂಧಿ ಅಪಘಾತ ಆಸ್ಪತ್ರೆ ಮತ್ತು ಸಂಶೋಧನಾ ಸಂಸ್ಥೆ ಬೆಂಗಳೂರು ಅಥವಾ ಸಂಬಂಧಿಸಿದ ಸರ್ಕಾರಿ ಆಸ್ಪತ್ರೆ ಮುಖ್ಯಸ್ಥರಿಗೆ ಬಿಡುಗಡೆ ಮಾಡಬೇಕು. ಚಿಕಿತ್ಸೆಗೆ ರೂ. 15000ಕ್ಕಿಂತಲೂ ಹೆಚ್ಚಿಗೆ ವೆಚ್ಚವು ತಗುಲಿದಲ್ಲಿ ಹೆಚ್ಚಿನ ಮೊತ್ತವನ್ನು ಅರ್ಜಿದಾರರೇ ಭರಿಸತಕ್ಕದ್ದು. ಅರ್ಜಿದಾರರಿಗೆ ಚಿಕಿತ್ಸೆಯು ಸಂಪೂರ್ಣವಾದ ನಂತರ ವೈದ್ಯಕೀಯ ವರದಿಯೊಂದಿಗೆ ಆಸ್ಪತ್ರೆಯಲ್ಲಿ ದೊರಕುವ ಸೌಲಭ್ಯ ಹಾಗೂ ಔಷಧಿಗಳ ವೆಚ್ಚದ ಬಗ್ಗೆ ಅಧಿಕೃತ ಬಿಲ್ಲು, ರಸೀತಿಗಳನ್ನು ದೃಢೀಕರಿಸಿ, ನಿರ್ದೇಶಕರು, ಸಂಜಯ ಗಾಂಧಿ ಅಪಘಾತ ಆಸ್ಪತ್ರೆ ಮತ್ತು ಸಂಶೋಧನಾ ಸಂಸ್ಥೆ ಅಥವಾ ಸಂಬಂಧಿಸಿದ ಸರ್ಕಾರಿ ಆಸ್ಪತ್ರೆಗಳ ...... ಮುಖ್ಯಸ್ಥರು, ನಿರ್ದೇಶಕರು, ಅಂಗವಿಕಲರ ಕಲ್ಯಾಣ ಇಲಾಖೆ, ಬೆಂಗಳೂರುರವರಿಗೆ ಸಲ್ಲಿಸತಕ್ಕದ್ದು. ಸಹಾಯಧನ ಮೊತ್ತದಲ್ಲಿನ ಉಳಿತಾಯವನ್ನು ಇಲಾಖೆಗೆ ಆಸ್ಪತ್ರೆಯು ಹಿಂತಿರುಗಿಸತಕ್ಕದ್ದು.

**ಸಹಾಯಧನ ಷರತ್ತುಗಳು:**

ಸಹಾಯಧನ ಷರತ್ತುಗಳು ಈ ಕೆಳಕಂಡಂತಿವೆ:

ಅರ್ಜಿದಾರರ ಕುಟುಂಬದ ವಾರ್ಷಿಕ ವರಮಾನ: ಗ್ರಾಮೀಣ ಪ್ರದೇಶದವರಾಗಿದ್ದಲ್ಲಿ ರೂ.25000/- ನಗರ ಪ್ರದೇಶದವರಾಗಿದ್ದಲ್ಲಿ ರೂ.50,000/- ಮತ್ತು ಅದಕ್ಕಿಂತಲೂ ಕಡಿಮೆ ಇರತಕ್ಕದ್ದು.

(ಹುಲಿಯಪ್ಪ)
ಸರ್ಕಾರದ ಕಾರ್ಯದರ್ಶಿಗಳು
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.
ಬೆಂಗಳೂರು.

ನಿರ್ದೇಶಕರು
ಸಂಜಯ ಗಾಂಧಿ ಅಪಘಾತ ಆಸ್ಪತ್ರೆ
ಮತ್ತು ಸಂಶೋಧನಾ ಸಂಸ್ಥೆ
ಬೆಂಗಳೂರು.

ಅಥವಾ

.................................... ಆಸ್ಪತ್ರೆ

ನಂ:.................................... ದಿನಾಂಕ:..............................

ಶ್ರೀ/ಶ್ರೀಮತಿ ....................................ರವರನ್ನು ಹಾಗೂ ಅವರು ಸಲ್ಲಿಸಿರುವ ದಾಖಲೆಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿದೆ. ಅರ್ಜಿದಾರರು ........................ ಅಂಗವಿಕಲತೆಯುಳ್ಳ ವ್ಯಕ್ತಿಯಾಗಿರುತ್ತಾರೆ.

1. ಅರ್ಜಿದಾರರಿಗೆ ಅಗತ್ಯವಿರುವ ಚಿಕಿತ್ಸೆ:

ಶಸ್ತ್ರ ಚಿಕಿತ್ಸೆಯ ಸ್ವರೂಪ

2. ಆಸ್ಪತ್ರೆಯಲ್ಲಿ ಲಭ್ಯವಿರುವ ಸೌಲಭ್ಯಗಳು:

ಹಾಗೂ ಔಷಧಗಳ ವೆಚ್ಚವನ್ನು ಹೊರತುಪಡಿಸಿ ತಗಲುವ ವೆಚ್ಚ:

ರಶೀತಿ/ಬಿಲ್ಲುಗಳನ್ನು ದೃಢೀಕರಿಸಬೇಕು.

ಶ್ರೀ/ಶ್ರೀಮತಿ........................ರವರು ಸಲ್ಲಿಸಿರುವ ದಾಖಲೆ ಮಾಹಿತಿಗಳು ಸರಿಯಾಗಿವೆ. ಅರ್ಜಿದಾರರಿಗೆ ........................ಚಿಕಿತ್ಸೆಯಾಗಬೇಕಾಗಿದ್ದು ಇದಕ್ಕಾಗಿ ಆಸ್ಪತ್ರೆಯಲ್ಲಿ ಲಭ್ಯವಿರುವ ಸೌಲಭ್ಯಗಳು ಹಾಗೂ ಔಷಧಿಗಳ ವೆಚ್ಚವನ್ನು ಹೊರತುಪಡಿಸಿ ರೂ........................ಗಳ ವೆಚ್ಚವು ತಗಲುತ್ತದೆ. ಅರ್ಜಿದಾರರಿಗೆ ಅಗತ್ಯವಿರುವ ಚಿಕಿತ್ಸೆ ನೀಡಲು ಆಸ್ಪತ್ರೆಯು ಸಿದ್ಧವಾಗಿದೆ.

ಅಂಗವಿಕಲರಿಗೆ ಚಿಕಿತ್ಸೆ ನೀಡುವ ಸಲುವಾಗಿ ಆಸ್ಪತ್ರೆಯಲ್ಲಿ ಲಭ್ಯವಿರುವ ಸೌಲಭ್ಯಗಳು ಹಾಗೂ ಔಷಧಿಗಳ ವೆಚ್ಚವನ್ನು ಹೊರತುಪಡಿಸಿ ರೂ....ಗಳ ಸಹಾಯಧನವನ್ನು ಆಸ್ಪತ್ರೆಗೆ ಮಂಜೂರು ಮಾಡುವಂತೆ ಕೋರಿದೆ. ಅಗತ್ಯವಿರುವ ಸಹಾಯಧನದ ಬಿಲ್ಲನ್ನು ಸಿದ್ಧ ಮಾಡಿ ಇದರೊಂದಿಗೆ ಲಗತ್ತಿಸಿದೆ. ಅರ್ಜಿದಾರರಿಗೆ ಚಿಕಿತ್ಸೆ ನೀಡಿದ ನಂತರ ಒಂದು ತಿಂಗಳ ಒಳಗಾಗಿ ವೈದ್ಯಕೀಯ ವರದಿಯ ಸಮೇತ ತಗುಲಿದ ವೆಚ್ಚದ ಬಗ್ಗೆ ಬಿಲ್ಲು/ರಶೀತಿಗಳನ್ನು ದೃಢೀಕರಿಸಿ ಸಲ್ಲಿಸಲಾಗುವುದು.

ತಮ್ಮ ವಿಶ್ವಾಸಿ,
ಸಹಿ

ಆಸ್ಪತ್ರೆಯ ಮುಖ್ಯಸ್ಥರು

## ಅರ್ಜಿ ನಮೂನೆ

ಅಂಗವಿಕಲತೆಯ ಸ್ವರೂಪವನ್ನು
ತೋರಿಸುವ ಭಾವಚಿತ್ರ

ರವರಿಗೆ:

ಅಂಗವಿಕಲರ ಕಲ್ಯಾಣ ಇಲಾಖೆ,
ನೆಲಮಹಡಿ, ಪೋಡಿಯಂ ಬ್ಲಾಕ್
ವಿಶ್ವೇಶ್ವರಯ್ಯ ಕೇಂದ್ರ, ಡಾ.ಬಿ.ಆರ್. ಅಂಬೇಡ್ಕರ್ ವೀಧಿ,
ಬೆಂಗಳೂರು - 560 001.

ಮಾನ್ಯರೇ,

ವಿಷಯ: "ಅಂಗವಿಕಲತೆ ನಿವಾರಣಾ ವೈದ್ಯಕೀಯ ಪರಿಹಾರ ನಿಧಿ" ಯೋಜನೆಯಡಿ ಧನಸಹಾಯಕ್ಕಾಗಿ ಅರ್ಜಿ ಸಲ್ಲಿಸುತ್ತಿರುವ ಕುರಿತು.

ನಾನು.................................ಅಂಗವಿಕಲತೆಯುಳ್ಳ ವ್ಯಕ್ತಿಯಾಗಿದ್ದು ವೈದ್ಯಕೀಯ ಶುಶ್ರೂಷೆ/ಶಸ್ತ್ರ ಚಿಕಿತ್ಸೆಗಾಗಿ ರೂ.......................ಗಳ ಸಹಾಯಧನವನ್ನು ಮಂಜೂರು ಮಾಡಬೇಕೆಂದು ಕೋರುತ್ತೇನೆ.

ನನ್ನ ವೈಯಕ್ತಿಕ ವಿವರಗಳು ಕೆಳಕಂಡಂತಿವೆ:

1. ಹೆಸರು :
2. ತಂದೆ/ಪೋಷಕರ ಹೆಸರು :
3. ಅಂಚೆ ವಿಳಾಸ :
4. ಖಾಯಂ ವಿಳಾಸ :
5. ಅಂಗವಿಕಲತೆಯ ಸ್ವರೂಪ (ಸಕ್ರಮ ಪ್ರಾಧಿಕಾರದಿಂದ ಪಡೆದ ವೈದ್ಯಕೀಯ ಪ್ರಮಾಣ ಪತ್ರವನ್ನು ಲಗತ್ತಿಸಬೇಕು)
6. ಅರ್ಜಿದಾರರ ವರಮಾನವು ಸೇರಿದಂತೆ ಕುಟುಂಬದ ವಾರ್ಷಿಕ ವರಮಾನ (ಸಕ್ರಮ ಪ್ರಾಧಿಕಾರದಿಂದ ಪಡೆದ ವರಮಾನ ಪ್ರಮಾಣ ಪತ್ರವನ್ನು ಲಗತ್ತಿಸಬೇಕು) :
7. ಬೇಕಾದ ವೈದ್ಯಕೀಯ ಶುಶ್ರೂಷೆ/ಶಸ್ತ್ರ ಚಿಕಿತ್ಸೆ ಸ್ವರೂಪ :
8. ಚಿಕಿತ್ಸೆಯನ್ನು ಪಡೆಯಲಿಚ್ಛಿಸುವ ಸರ್ಕಾರಿ ಆಸ್ಪತ್ರೆಯ ಹೆಸರು ಮತ್ತು ವಿಳಾಸ :

ಮೇಲಿನ ಮಾಹಿತಿಗಳು ಸತ್ಯವಾಗಿದ್ದು ರೂ.15000ಕ್ಕಿಂತಲೂ ಹೆಚ್ಚಿಗೆಯಾಗುವ ವೆಚ್ಚವನ್ನು ಸ್ವಂತವಾಗಿ ಭರಿಸುತ್ತೇವೆ. ಚಿಕಿತ್ಸೆಯನ್ನು ಸಂಜಯ ಗಾಂಧಿ ಅಪಘಾತ ಆಸ್ಪತ್ರೆ ಮತ್ತು ಸಂಶೋಧನಾ ಸಂಸ್ಥೆ ಸರ್ಕಾರಿ ಆಸ್ಪತ್ರೆ..............................ಆಸ್ಪತ್ರೆಯಲ್ಲಿ ಪಡೆಯಲು ಸಿದ್ಧನಿದ್ದೇನೆ. ದಯವಿಟ್ಟು ಅರ್ಜಿಯನ್ನು ಪರಿಶೀಲನೆಗಾಗಿ ನಿರ್ದೇಶಕರು, ಸಂಜಯ ಗಾಂಧಿ ಅಪಘಾತ ಆಸ್ಪತ್ರೆ ಮತ್ತು ಸಂಶೋಧನಾ ಸಂಸ್ಥೆ ಸರ್ಕಾರಿ ಆಸ್ಪತ್ರೆ / ..............................ಆಸ್ಪತ್ರೆಗೆ ಕಳುಹಿಸಬೇಕೆಂದು ವಿನಂತಿಸುತ್ತೇನೆ.

ತಮ್ಮ ವಿಶ್ವಾಸಿ,

ಸಹಿ

(ಹೆಸರು).

ಸಂ.ನಿಅಕಇ:............................ ದಿನಾಂಕ........................

ಶ್ರೀ:ಶ್ರೀಮತಿ...............................ರವರು ವೈದ್ಯಕೀಯ ಶುಶ್ರೂಷೆ:ಶಸ್ತ್ರ ಚಿಕಿತ್ಸೆಗಾಗಿ ಧನಸಹಾಯ ಕೋರಿ ಸಲ್ಲಿಸಿರುವ ಅರ್ಜಿ ಹಾಗೂ ಆಧಾರಗಳನ್ನು ಇದರೊಂದಿಗೆ ದ್ವಿಪ್ರತಿಯಲ್ಲಿ ಲಗತ್ತಿಸಿ ಕಳುಹಿಸಿದೆ. ಮಂಜೂರು ಮಾಡಬಹುದಾದ ಸಹಾಯಧನದ ಗರಿಷ್ಠ ಮಿತಿ ರೂ.25000ಗಳು ಮಾತ್ರ. ಚಿಕಿತ್ಸೆಗೆ ಇದಕ್ಕಿಂತಲೂ ಹೆಚ್ಚಿಗೆ ವೆಚ್ಚವು ತಗಲುತ್ತಿದ್ದಲ್ಲಿ ಹೆಚ್ಚಿನ ವೆಚ್ಚವನ್ನು ಅರ್ಜಿದಾರರೇ ಭರಿಸಬೇಕಾಗುತ್ತದೆ. ದಯವಿಟ್ಟು ಅರ್ಜಿದಾರರನ್ನು ಹಾಗೂ ದಾಖಲೆಗಳನ್ನು ವೈದ್ಯಕೀಯವಾಗಿ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಕಾಲಂಗಳನ್ನು ಭರ್ತಿ ಮಾಡಿ ದೃಢೀಕರಣದೊಂದಿಗೆ ಹಿಂದಿರುಗಿಸುವಂತೆ ಕೋರಿದೆ.

ತಮ್ಮ ವಿಶ್ವಾಸಿ

## ಕರ್ನಾಟಕ ಸರ್ಕಾರ

ಸಂಖ್ಯೆ:ಮಮಅ:39:ಪಿಹೆಚ್‌ಪಿ.2001

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹು ಮಹಡಿಗಳ ಕಟ್ಟಡ
ಬೆಂಗಳೂರು, ದಿನಾಂಕ: 30-3-2001

ಸೇರ್ಪಡೆ

ಸರ್ಕಾರಿ ಆದೇಶ ಸಂಖ್ಯೆ:ಮಮಅ:341 ಪಿಹೆಚ್‌ಪಿ 2001, ದಿನಾಂಕ: 7-8-2001ರ ಅನುಬಂಧದ ''ಅನುಷ್ಠಾನ'' ಉಪಶೀರ್ಷಿಕೆಯಲ್ಲಿ, ಈ ಯೋಜನೆಯನ್ನು ಸಂಜಯಗಾಂಧಿ ಅಪಘಾತ ಆಸ್ಪತ್ರೆ ಮತ್ತು ಸಂಶೋಧನಾ ಸಂಸ್ಥೆ ಬೆಂಗಳೂರು ಮತ್ತು ಎಲ್ಲಾ ಸರ್ಕಾರಿ ಆಸ್ಪತ್ರೆಗಳ ಪದಗಳ ನಂತರ ''ಸುಸಜ್ಜಿತ ದೊಡ್ಡ ಖಾಸಗಿ ಆಸ್ಪತ್ರೆಗಳ'' ಎಂಬುದನ್ನು ಸೇರಿಸಿಕೊಂಡು, ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
(ಹುಲಿಯಪ್ಪ)
ಸರ್ಕಾರದ ಕಾರ್ಯದರ್ಶಿಗಳು
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ,
ಬೆಂಗಳೂರು.

(1)

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಅಂಗವಿಕಲತೆ ನಿವಾರಣಾ ವೈದ್ಯಕೀಯ ಪರಿಹಾರ ನಿಧಿ ಯೋಜನೆಯಡಿ ನೀಡುತ್ತಿರುವ ಸಹಾಯಧನವನ್ನು ಪರಿಷ್ಕರಿಸಿ ಮುಂಜೂರಾತಿ ನೀಡುವ ಬಗ್ಗೆ.

ಓದಲಾಗಿದೆ: 1. ಸರ್ಕಾರದ ಆದೇಶ ಸಂ:ಮಮಇ 341 ಪಿಹೆಚ್‌ಪಿ 2000, ದಿನಾಂಕ:07.08.2000.

2. ನಿರ್ದೇಶಕರು, ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆ, ಇವರ ಪತ್ರ ಸಂಖ್ಯೆ:ನಿಅಕಇ:ವೈ.ಪ.ನಿ/89/-2008-09/ ದಿನಾಂಕ:02.05.2008.

3. ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರು ಇವರ ಅಧ್ಯಕ್ಷತೆಯಲ್ಲಿ ದಿನಾಂಕ: 07.8.2008ರಂದು ನಡೆದ ಅಧಿಕಾರಿಯುಕ್ತ ಸಮಿತಿ ಸಭೆಯ ನಡವಳಿಗಳು.

***

ಪ್ರಸ್ತಾವನೆ:

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಆದೇಶದಲ್ಲಿ ಸರ್ಕಾರಿ ಆಸ್ಪತ್ರೆ ಅಥವಾ ಸಂಜಯಗಾಂಧಿ ಅಪಘಾತ ಆಸ್ಪತ್ರೆಯಲ್ಲಿ ಸರ್ಜರಿಗೆ ಒಳಪಡುವ ಅಂಗವಿಕಲರಿಗೆ ವೈದ್ಯಕೀಯ ಪರಿಹಾರ ಭತ್ಯೆ ನೀಡುವ ಯೋಜನೆಗೆ ಪ್ರತ್ಯೇಕ ಅನುದಾನ ಒದಗಿಸಿಕೊಡುವ ಯೋಜನೆಯನ್ನು ದಿನಾಂಕ:1.4.2006ರಿಂದ ಜಾರಿಗೆ ತರಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ನಿರ್ದೇಶಕರು, ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆ ಇವರ ದಿನಾಂಕ:2.5.2008ರ ಪತ್ರದಲ್ಲಿನ ಪ್ರಸ್ತಾವನೆಯಲ್ಲಿ ಈ ಯೋಜನೆಯಡಿ ಅಂಗವಿಕಲತೆಯನ್ನು ಶಸ್ತ್ರ ಚಿಕಿತ್ಸೆ ಮುಖಾಂತರ ಸರಿಪಡಿಸಿಕೊಳ್ಳಲು ಧನಸಹಾಯವನ್ನು ನೀಡುತ್ತಿದ್ದು, ಈ ಯೋಜನೆಯಡಿ ಗರಿಷ್ಠ ರೂ.15,000/-ಗಳಿಗೆ ಸಹಾಯಧನವನ್ನು ಆಸ್ಪತ್ರೆ ಮುಖ್ಯಸ್ಥರಿಗೆ ನೇರವಾಗಿ ನೀಡಲಾಗುತ್ತಿದ್ದು, ಸ್ಪರ್ಶ ಆಸ್ಪತ್ರೆ, ಬೆಂಗಳೂರು ಇವರು ಚಿಕ್ಕ ಗುರುತು ಯೋಜನೆಯಡಿ 0-6 ವರ್ಷದ ಮಕ್ಕಳ ಹುಟ್ಟಿನಿಂದಾದ ಶಸ್ತ್ರ ಚಿಕಿತ್ಸೆಯನ್ನು ಮಾಡಲು ಗರಿಷ್ಠ ರೂ. 40,000/-ದಿಂದ ರೂ. 45,000/-ಗಳವರೆಗೆ ವೆಚ್ಚ ತಗುಲಬಹುದೆಂದು ತಿಳಿಸಿದ್ದು, ಸಹಾಯಧನವನ್ನು ಹೆಚ್ಚಿಸಲು ಕೋರಿದ್ದು, ದೊಡ್ಡ ಶಸ್ತ್ರ ಚಿಕಿತ್ಸೆಗೆ ರೂ.1,00,000/-ವರೆಗೆ ವೆಚ್ಚ ತಗುಲುತ್ತದೆಂದು ಈ ಎಲ್ಲಾ ಪ್ರಕರಣಗಳನ್ನು ಪರಿಗಣಿಸಿ ಈಗ ಇರುವ ಸಹಾಯಧನ ರೂ.15,000/-ಗಳಿಂದ ರೂ.1,00,000/-ದವರೆಗೆ ಹೆಚ್ಚಿಸುವುದು ಅವಶ್ಯಕತೆ ಇರುತ್ತದೆಂದು ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿನ ನಡವಳಿಯಲ್ಲಿ ಅಪರ ಮುಖ್ಯಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ಅಧಿಕಾರಿಯುಕ್ತ ಸಮಿತಿಯ ದಿನಾಂಕ:7.8.2008ರ ಸಭೆಯಲ್ಲಿ [illegible] ಪರಿಶೀಲಿಸಿ ಈ ಯೋಜನೆಯಡಿ ಅಂಗವಿಕಲರು ಶಸ್ತ್ರ ಚಿಕಿತ್ಸೆಯನ್ನು ಸಂಜಯಗಾಂಧಿ [illegible] ಸಂಸ್ಥೆ, ಬೆಂಗಳೂರು ಹಾಗೂ ಜಿಲ್ಲಾ ಸರ್ಕಾರಿ ಆಸ್ಪತ್ರೆ ಅಥವಾ ಸುಸಜ್ಜಿತ ಖಾಸಗಿ [illegible] ಪಡೆಯಬಹುದೆಂದು, ಒಂದು ಶಸ್ತ್ರ ಚಿಕಿತ್ಸೆಗೆ ಸಾಮಾನ್ಯವಾಗಿ ಗರಿಷ್ಠ ರೂ.1,00,000/- [illegible] ರೂ. 15,000/-ಗಳ [illegible] ರೂ. 35,000/-ಗರಿಷ್ಠ ಮೊತ್ತಕ್ಕೆ ಹೆಚ್ಚಿಸಲು [illegible] ತೀರ್ಮಾನಿಸಲಾಗಿದೆ.

21

**ಸರ್ಕಾರದ ಆದೇಶ ಸಂಖ್ಯೆ: ಮಮಅ:239:ಪಿಹೆಚ್‌ಪಿ:2004:ಬೆಂಗಳೂರು. ದಿನಾಂಕ: 21-04-2005**

ವಾರ್ಷಿಕ ವರಮಾನ ರೂ. 6,000/-ಕ್ಕಿಂತ ಕಡಿಮೆ ಇರುವ ಮಾನಸಿಕ ಅಸ್ವಸ್ಥರಿಗೆ ಈಗಾಗಲೇ ಅಂಗವಿಕಲರಿಗೆ ನೀಡುತ್ತಿರುವಂತೆ ಮಾಸಿಕ ರೂ. 125/- ಗಳ ನಿರ್ವಹಣಾ ಭತ್ಯೆ / ಪೋಷಣಾ ಭತ್ಯೆಯನ್ನು ನೀಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ. ಈ ಆದೇಶವು ದಿ. 1.4.2005 ರಿಂದ ಜಾರಿಗೆ ಬರುತ್ತದೆ.

ಇದಕ್ಕೆ ಸಂಬಂಧಪಟ್ಟ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2235-02-101-0-20 (ಯೋಜನೇತರ) ರಡಿಯಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
(ಆರ್.ಎಂ. ಚಂದ್ರಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ
ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಇಲಾಖೆ

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಬುದ್ಧಿಮಾಂದ್ಯ ವ್ಯಕ್ತಿಗಳ ತಂದೆ/ತಾಯಿ/ಪೋಷಕರಿಗೆ ವಿಮಾ ಸೌಲಭ್ಯವನ್ನು ಒದಗಿಸುವ ಸಲುವಾಗಿ ಯೋಜನೆಯನ್ನು ಪರಿಷ್ಕರಿಸುವ ಬಗ್ಗೆ.

ಓದಲಾಗಿದೆ: 1) ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್/29/ಪಿಹೆಚ್‌ಸಿ92/ದಿನಾಂಕ: 20-2-1993.

2) ನಿರ್ದೇಶಕರು ಅಂಗವಿಕಲರ ಕಲ್ಯಾಣ ಇಲಾಖೆ ಇವರ ಪತ್ರ ಸಂಖ್ಯೆ: ನಿಅಕಇ/1-ಎಲ್.ಐ.ಸಿ/ಎಂ.ಆರ್.ಸ್ಕೀಮ್/95-96/ದಿನಾಂಕ:27-7-95.

### ಪ್ರಸ್ತಾವನೆ:

ಉಲ್ಲೇಖ (1)ರ ಆದೇಶದಲ್ಲಿ ಬುದ್ಧಿಮಾಂದ್ಯ ಮಕ್ಕಳ ತಂದೆ/ತಾಯಿ/ಪೋಷಕರಿಗೆ ವಿಮಾ ಸೌಲಭ್ಯಗಳನ್ನು ಒದಗಿಸುವ ಸಲುವಾಗಿ ಆದೇಶ ಹೊರಡಿಸಲಾಗಿದೆ. ಸದರಿ ಯೋಜನೆಯ ಪ್ರಕಾರ ಅಂಗವಿಕಲ ಕಲ್ಯಾಣ ಇಲಾಖೆಯು ಕೆ.ಪಿ.ಎಂ.ಆರ್.ಸಿ. ಸಂಸ್ಥೆಗೆ ರೂ. 550-00ಹಾಗೂ ರೂ. 1,100-00ಗಳ ಒಂದು ಸಾರಿಯ ವಿಮಾ ಕಂತನ್ನು ಬುದ್ಧಿಮಾಂದ್ಯ ವ್ಯಕ್ತಿಗಳ ತಂದೆ/ತಾಯಿ/ಪೋಷಕರ ಪರವಾಗಿ ಪಾವತಿ ಮಾಡುತ್ತಿತ್ತು. ಸಂಸ್ಥೆಯು ಸದಸ್ಯತ್ವದ ಶುಲ್ಕವನ್ನಾಗಿ ಪ್ರತಿ ಫಲಾನುಭವಿಗಳಿಂದ ರೂ. 200.00ಗಳನ್ನು ಪಡೆಯುತ್ತಿತ್ತು.

ಕೆ.ಪಿ.ಎ.ಎಂ.ಆರ್.ಸಿ. ಸಂಸ್ಥೆಯು ಸರ್ಕಾರದಿಂದ ಪಡೆದ ಒಂದು ಸಾರಿ ಪ್ರೀಮಿಯಂ ಕಂತನ್ನು ಭಾರತೀಯ ಜೀವವಿಮಾ ನಿಗಮಕ್ಕೆ ಒಂದೇ ಬಾರಿಗೆ ಪಾವತಿ ಮಾಡದೆ ವಾರ್ಷಿಕವಾಗಿ (ವಾರ್ಷಿಕ ವಿಮಾ ಕಂತು ಸುಮಾರು 100-200) ಪಾವತಿ ಮಾಡುತ್ತಿದ್ದು ಈ ಬಗ್ಗೆ ಭಾರತೀಯ ಜೀವ ವಿಮಾ ನಿಗಮವನ್ನು ಸಂಪರ್ಕಿಸಿದಾಗ ಸರ್ಕಾರದಿಂದ ಪಾವತಿ ಮಾಡುವ ಒಂದು ಬಾರಿ ವಿಮಾ ಕಂತನ್ನು ರಾಷ್ಟ್ರೀಕೃತ ಬ್ಯಾಂಕಿನಲ್ಲಾಗಲಿ ಅಥವಾ ಅಂಚೆ ಕಛೇರಿಯಲ್ಲಾಗಲಿ ನಿಶ್ಚಿತ ಠೇವಣಿಯಲ್ಲಿ ತೊಡಗಿಸಿದಲ್ಲಿ ಅದರಿಂದ ಬರುವ ಬಡ್ಡಿಯಿಂದಲೇ ವಾರ್ಷಿಕ ವಿಮಾ ಕಂತನ್ನು ಪಾವತಿ ಮಾಡುವ ಸಾಧ್ಯತೆ ಇದೆಯೆಂದು ನಿರ್ದೇಶಕರು, ಅಂಗವಿಕಲರ ಕಲ್ಯಾಣ ಇಲಾಖೆ ಅಭಿಪ್ರಾಯಪಟ್ಟಿರುತ್ತಾರೆ. ಅಲ್ಲದೆ 1991ರ ಅಂಗವಿಕಲ ಗಣತಿ ಪ್ರಕಾರ ರೂ. 12000-00ಗಳೊಳಗೆ ವಾರ್ಷಿಕ ವರಮಾನ ಇರುವ 34782 ಜನ ಬುದ್ಧಿಮಾಂದ್ಯ ವ್ಯಕ್ತಿಗಳು ಇದ್ದು ಅವರುಗಳಿಗೆ ಹಾಲಿ ಯೋಜನೆ ಪ್ರಕಾರ ವಿಮಾ ಸೌಲಭ್ಯ ಕಲ್ಪಿಸುವ ಸಲುವಾಗಿ ವಾರ್ಷಿಕ ರೂ. 3.00 ಲಕ್ಷಗಳ ಗುರಿಯಂತೆ ಸುಮಾರು 66 ವರ್ಷಗಳು ತಗಲುತ್ತದೆ. ಅಲ್ಲದೇ ಈ ಯೋಜನೆಯ ಜಾರಿಯಲ್ಲಿ ಅನೇಕ ವಾಸ್ತವಿಕ ತೊಡಕು ಕಂಡುಬರುವುದರಿಂದ ಹಾಲಿ ಇರುವ ವಿಮಾ ಯೋಜನೆಯನ್ನು ಭಾರತೀಯ ಜೀವ ವಿಮಾ ನಿಗಮದೊಂದಿಗೆ ಚರ್ಚಿಸಿ ಪರಿಷ್ಕೃತ ಯೋಜನೆಯೊಂದನ್ನು ರೂಪಿಸಿ ಸರ್ಕಾರದ ಅನುಮೋದನೆಗಾಗಿ

ಕಳುಹಿಸಿರುತ್ತಾರೆ. ಪರಿಷ್ಕರಿಸಿದ ಯೋಜನೆಯ ಪ್ರಕಾರ ಕರ್ನಾಟಕ ರಾಜ್ಯದಲ್ಲಿ ವಾಸವಾಗಿದ್ದು ರೂ. 12000-00ಗಳ ಒಳಗೆ ವಾರ್ಷಿಕ ವರಮಾನವಿರುವ ಬುದ್ಧಿಮಾಂದ್ಯ ವ್ಯಕ್ತಿಗಳ ತಂದೆ/ತಾಯಿ/ಪೋಷಕರಿಗೆ ತ್ವರಿತಗತಿಯಲ್ಲಿ ವಿಮಾ ಸೌಲಭ್ಯವನ್ನು ಒದಗಿಸಬಹುದಾಗಿದ್ದು, ಬುದ್ಧಿಮಾಂದ್ಯ ತಂದೆ, ತಾಯಿ, ಪೋಷಕರ ಪರವಾಗಿ ಇಲಾಖೆಯು ನೇರವಾಗಿ ಭಾರತೀಯ ಜೀವ ವಿಮಾ ನಿಗಮಕ್ಕೆ ವಿಮಾ ಕಂತನ್ನು ಪಾವತಿ ಮಾಡುವುದರಿಂದ ವಾಸ್ತವಿಕ ತೊಡಕುಗಳು ಸಹ ದೂರವಾಗುತ್ತದೆ ಎಂದು ತಿಳಿಸಿ, ಯೋಜನೆಯು ಜಾರಿಗೆ ಆದಷ್ಟು ಶೀಘ್ರವಾಗಿ ಸರ್ಕಾರದ ಮಂಜೂರಾತಿ ಕೋರಿದ್ದಾರೆ.

### ಸರ್ಕಾರದ ಆದೇಶ ಸಂಖ್ಯೆ: ಮಮಅ 291 ಪಿಹೆಚ್‌ಪಿ 95

### ಬೆಂಗಳೂರು, ದಿನಾಂಕ: 6ನೇ ಮಾರ್ಚ್ 97

ಮೇಲ್ಕಂಡ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕುಷವಾಗಿ ಪರಿಶೀಲಿಸಲಾಗಿದೆ. ದಿನಾಂಕ: 20-1-93ರ ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್ 29/ಪಿಹೆಚ್‌ಪಿ 92 ರಲ್ಲಿ ಜಾರಿಗೆ ತರಲಾಗಿರುವ ಅಂಗವಿಕಲರ ಗ್ರೂಪ್ ಇನ್ಸುರೆನ್ಸ್ ಯೋಜನೆಯನ್ನು ಪರಿಷ್ಕರಿಸಿ ಈ ಕೆಳಕಂಡ ಪರಿಷ್ಕೃತ ಅಂಗವಿಕಲರ ವಿಮಾ ಯೋಜನೆಯನ್ನು ಜಾರಿಗೆ ತರಲು ಸರ್ಕಾರದ ಅನುಮೋದನೆ ನೀಡಲಾಗಿದೆ. ಕರ್ನಾಟಕ ರಾಜ್ಯದಲ್ಲಿ ವಾಸವಾಗಿದ್ದು ರೂ. 12,000-00ಗಳೊಳಗೆ ವಾರ್ಷಿಕ ವರಮಾನ ಇರುವ ಬುದ್ಧಿಮಾಂದ್ಯ ವ್ಯಕ್ತಿಗಳ ತಂದೆ/ತಾಯಿ/ಪೋಷಕರಿಗೆ ವಿಮಾ ಸೌಲಭ್ಯವನ್ನು ಒದಗಿಸುವ ಪರಿಷ್ಕೃತ ಯೋಜನೆಗೆ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಯೋಜನೆಗೆ ಸಂಬಂಧಿಸಿದ ವಿವರಗಳನ್ನು ಈ ಕೆಳಗೆ ನೀಡಲಾಗಿದೆ:

ಬುದ್ಧಿಮಾಂದ್ಯ ವ್ಯಕ್ತಿಗಳ ತಂದೆ/ತಾಯಿ/ಪೋಷಕರಿಗೆ ವಿಮಾ ಯೋಜನೆ:

1. ಪ್ರಸ್ತಾವನೆ: ಕರ್ನಾಟಕ ರಾಜ್ಯದಲ್ಲಿರುವ ಬುದ್ಧಿಮಾಂದ್ಯ ವ್ಯಕ್ತಿಗಳ ತಂದೆ/ತಾಯಿ/ಪೋಷಕರಿಗೆ ಭಾರತೀಯ ಜೀವವಿಮಾ ನಿಗಮದಲ್ಲಿ ವಿಮ ಸೌಲಭ್ಯ ಕಲ್ಪಿಸಿ ಬುದ್ಧಿಮಾಂದ್ಯ ವ್ಯಕ್ತಿಗಳ ತಂದೆ/ತಾಯಿ/ಪೋಷಕರು ನಿಧನರಾದ ನಂತರ ಬುದ್ಧಿಮಾಂದ್ಯ ವ್ಯಕ್ತಿಗಳಿಗೆ ಆರ್ಥಿಕ ಸೌಲಭ್ಯಗಳನ್ನು ಒದಗಿಸುವ ಸಲುವಾಗಿ ಸರ್ಕಾರವು ಆದೇಶದ ಸಂಖ್ಯೆ: ಎಸ್‌ಡಬ್ಲ್ಯೂಎಲ್ 29 ಪಿಹೆಚ್‌ಪಿ 92 ದಿನಾಂಕ: 20-2-93ರಲ್ಲಿ ಯೋಜನೆ ಮಂಜೂರಾತಿ ನೀಡಿರುತ್ತದೆ. ಈ ಯೋಜನೆಯಲ್ಲಿನ ಸೂಚನೆಗಳ ಪ್ರಕಾರ ವಾರ್ಷಿಕ ರೂ.10,000-00ಕ್ಕೆ ಮೇಲ್ಪಟ್ಟು ರೂ.12,000-00ದ ಒಳಗೆ ಇರುವ ವ್ಯಕ್ತಿಗಳಿಗೆ ರೂ. 1,000-00ರಂತೆ ಒಂದು ಸಾರಿಯ ಪ್ರೀಮಿಯಂನ್ನು ಕೆ.ಪಿ.ಎ.ಎಂ.ಆರ್.ಸಿ.ರವರಿಗೆ ಅಂಗವಿಕಲರ ಕಲ್ಯಾಣ ಇಲಾಖೆಯು ಸಂದಾಯ ಮಾಡಬೇಕಾತ್ತು. ಅಲ್ಲದೆ ಫಲಾನುಭವಿಗಳು ರೂ. 200-00ಗಳನ್ನು ಕೆ.ಪಿ.ಎ.ಎಂ.ಆರ್.ಸಿ. ರವರಿಗೆ ಸದಸ್ಯತ್ವದ ಶುಲ್ಕವನ್ನಾಗಿ ಪಾವತಿ ಮಾಡಬೇಕಾಗಿತ್ತು. ಬುದ್ಧಿಮಾಂದ್ಯ ವ್ಯಕ್ತಿಗಳ ತಂದೆ/ತಾಯಿ/ಪೋಷಕರು ಅಂದರೆ ವಿಮಾದಾರರು ನಿಧನರಾದ ನಂತರ ಬುದ್ಧಿಮಾಂದ್ಯ ವ್ಯಕ್ತಿಗಳು ರೂ. 100-00 (10,000ರ ಒಳಗೆ ವಾರ್ಷಿಕ ವರಮಾನವಿರುವ ವ್ಯಕ್ತಿಗಳು) ಮತ್ತು ರೂ.200 (10,000ರಿಂದ 12,000ದ ಒಳಗೆ ವಾರ್ಷಿಕ ವರಮಾನವಿರುವ ವ್ಯಕ್ತಿಗಳು)ಗಳ ಮಾಸಿಕ ಧನವನ್ನು ಪಡೆಯುತ್ತಿದ್ದರು.

ಅಂಗವಿಕಲರ ಕಲ್ಯಾಣ ಇಲಾಖೆಯು ಪಾವತಿ ಮಾಡಿದ ಒಂದು ಸಾರಿಯ ಪ್ರೀಮಿಯಂ ಕಂತನ್ನು ಕೆ.ಪಿ.ಎ.ಎಂ.ಆರ್.ಸಿ.ರವರು ಒಂದೇ ಸಾರಿ ಭಾರತೀಯ ಜೀವವಿಮಾ ನಿಗಮಕ್ಕೆ ಪಾವತಿ ಮಾಡುತ್ತಿರುವರೆಂದೂ ಹಾಗೂ ಇಲಾಖೆಯು ಪಾವತಿ ಮಾಡಿದ ಒಂದು ಸಾರಿಯ ಪ್ರೀಮಿಯಂ ಕಂತನ್ನು ರಾಷ್ಟ್ರೀಕೃತ ಬ್ಯಾಂಕ್‌ಗಳ ಹಾಗೂ ಅಂಚೆ ಕಛೇರಿಗಳಲ್ಲಿ ನಿಶ್ಚಿತ ಠೇವಣಿಯಾಗಿಟ್ಟಲ್ಲಿ ಸುಮಾರು ಶೇ.12ರಷ್ಟು ಬಡ್ಡಿಯು ದೊರೆಯಬಹುದಾಗಿದ್ದು ಈ ಬಡ್ಡಿಯ ಮುಖಾಂತರ ಬರುವ ಮೊತ್ತದಿಂದ ವಾರ್ಷಿಕ ವಿಮಾ ಕಂತಿನ ಮೊತ್ತವಾದ ರೂ. 100ರಿಂದ 120ಗಳನ್ನು ಭರಿಸಬಹುದಾಗಿರುತ್ತದೆ. ಅಲ್ಲದೇ ಕೆ.ಪಿ.ಎ.ಎಂ.ಆರ್.ಸಿ. ರವರ ಮುಖಾಂತರ

ಈಗ ಜಾರಿಯಲ್ಲಿರುವ ಯೋಜನೆಯ ಪ್ರಕಾರ ವಾರ್ಷಿಕವಾಗಿ ಸುಮಾರು 100 ಫಲಾನುಭವಿಗಳಿಗೆ ಮಾತ್ರ ಸೌಲಭ್ಯವನ್ನು ಒದಗಿಸಬಹುದಾಗಿರುತ್ತದೆ. 1991ರ ಅಂಗವಿಕಲರ ಗಣತಿಯ ಪ್ರಕಾರ ಕರ್ನಾಟಕದಲ್ಲಿ ಒಟ್ಟು 36,850 ಬುದ್ಧಿಮಾಂದ್ಯ ವ್ಯಕ್ತಿಗಳಿದ್ದು ಇವರುಗಳಲ್ಲಿ 12000ದ ಒಳಗೆ ವಾರ್ಷಿಕ ವರಮಾನವಿರುವ 34782 ಜನರಿರುತ್ತಾರೆ. ಇವರುಗಳಿಗೆ ವಿಮಾ ಸೌಲಭ್ಯವನ್ನು ಒದಗಿಸಲು ವರ್ಷಕ್ಕೆ 150 ಫಲಾನುಭವಿಗಳಿಗೆ ಲೆಕ್ಕಾಚಾರ ಮಾಡಿದಲ್ಲಿ ಈಗಿರುವ ಯೋಜನೆಯ ಪ್ರಕಾರ ಬಹಳಷ್ಟು ವರ್ಷಗಳು ತಗಲುತ್ತದೆ. ಅಲ್ಲದೆ ಈ ಯೋಜನೆಯ ಜಾರಿಯಲ್ಲಿ ಅನೇಕ ವಾಸ್ತವಿಕ ಅಡಚಣೆಗಳು ಇರುತ್ತವೆ. ಆದ್ದರಿಂದ ಈಗಿರುವ ಯೋಜನೆಯನ್ನು ಪರಿಷ್ಕರಿಸಿ ಅಂಗವಿಕಲರ ಕಲ್ಯಾಣ ಇಲಾಖೆಯೇ ನೇರವಾಗಿ ಬುದ್ಧಿಮಾಂದ್ಯ ವ್ಯಕ್ತಿಗಳ ತಂದೆ/ತಾಯಿ/ಪೋಷಕರಿಗೆ ವಿಮಾ ಸೌಲಭ್ಯಗಳನ್ನು ಒದಗಿಸುವುದು ಅತ್ಯಗತ್ಯವಾಗಿದೆ. ಪರಿಷ್ಕೃತ ಯೋಜನೆಯ ಪ್ರಕಾರ ವಿಮಾ ಕಂತನ್ನು ಅಂಗವಿಕಲರ ಕಲ್ಯಾಣ ಇಲಾಖೆಯು ಭಾರತೀಯ ಜೀವ ವಿಮಾ ನಿಗಮಕ್ಕೆ ನೇರವಾಗಿ ಪಾವತಿ ಮಾಡಬೇಕಾಗಿದ್ದು ಬುದ್ಧಿಮಾಂದ್ಯ ವ್ಯಕ್ತಿಗಳ ತಂದೆ/ತಾಯಿ/ಪೋಷಕರು ಕೆ.ಪಿ.ಎ.ಎಂ.ಆರ್.ಸಿ. ರವರಿಗೆ ಪಾವತಿ ಮಾಡಬೇಕಾಗಿದ್ದು ರೂ.200-00ಗಳ ಸದಸ್ಯತ್ವದ ಶುಲ್ಕವನ್ನು ತಪ್ಪಿಸುವುದಲ್ಲದೆ ವಾರ್ಷಿಕವಾಗಿ ಇನ್ನೂ ಹೆಚ್ಚಿನ ಫಲಾನುಭವಿಗಳಿಗೆ ಸೌಲಭ್ಯವನ್ನು ಒದಗಿಸುವುದರೊಂದಿಗೆ ಬುದ್ಧಿಮಾಂದ್ಯ ವ್ಯಕ್ತಿಗಳ ತಂದೆ/ತಾಯಿ/ಪೋಷಕರು ನಿಧನರಾದ ನಂತರ ಬುದ್ಧಿಮಾಂದ್ಯ ವ್ಯಕ್ತಿಗಳಿಗೆ ಭಾರತೀಯ ಜೀವ ವಿಮಾ ನಿಗಮವೇ ನೇರವಾಗಿ ಮಾಸಿಕ ಧನವನ್ನು ಪಾವತಿ ಮಾಡುತ್ತದೆ. ಪರಿಷ್ಕೃತ ಯೋಜನೆಯ ಪ್ರಕಾರ ವಾರ್ಷಿಕ ವಿಮಾಕಂತು ರೂ. 100ರಿಂದ ರೂ.150ರ ಒಳಗೆ ಇರುತ್ತದೆಂದು ಭಾರತೀಯ ಜೀವ ವಿಮಾ ನಿಗಮವು ತಿಳಿಸಿರುತ್ತದೆ.

2. **ಯೋಜನೆಯ ಹೆಸರು:** ಬುದ್ಧಿಮಾಂದ್ಯ ವ್ಯಕ್ತಿಗಳ ತಂದೆ/ತಾಯಿ/ಪೋಷಕರಿಗೆ ಸಮೂಹ ವಿಮಾ ಯೋಜನೆ

3. **ಯೋಜನೆಯ ಉದ್ದೇಶ:** ವಾರ್ಷಿಕವಾಗಿ ರೂ. 12000-00 ಮತ್ತು ಅದಕ್ಕಿಂತಲೂ ಕಡಿಮೆ ವರಮಾನವುಳ್ಳ ಬುದ್ಧಿಮಾಂದ್ಯ ವ್ಯಕ್ತಿಗಳ ತಂದೆ/ತಾಯಿ/ಪೋಷಕರಿಗೆ ಭಾರತೀಯ ಜೀವ ವಿಮಾ ನಿಗಮಕ್ಕೆ ಅಂಗವಿಕಲರ ಕಲ್ಯಾಣ ಇಲಾಖೆಯಿಂದ ವಾರ್ಷಿಕ ವಿಮಾ ಕಂತನ್ನು ಪಾವತಿ ಮಾಡಿ ವಿಮಾ ಸೌಲಭ್ಯವನ್ನು ಒದಗಿಸಲಾಗುತ್ತದೆ. ಬುದ್ಧಿಮಾಂದ್ಯ ವ್ಯಕ್ತಿಗಳ ತಂದೆ/ತಾಯಿ/ಪೋಷಕರು ನಿಧನರಾದ ನಂತರ ಬುದ್ಧಿಮಾಂದ್ಯ ವ್ಯಕ್ತಿಗಳ ಪೋಷಣೆಗಾಗಿ ಜೀವ ವಿಮಾ ನಿಗಮದಿಂದ ಮಾಸಿಕ ವರಮಾನ ದೊರೆಯುತ್ತದೆ.

4. **ವಿಮಾ ಸೌಲಭ್ಯದ ಷರತ್ತು ಮತ್ತು ನಿಯಮಗಳು:**

1) ಬುದ್ಧಿಮಾಂದ್ಯ ವ್ಯಕ್ತಿಗಳ ತಂದೆ/ತಾಯಿ/ಪೋಷಕರು: 18 ರಿಂದ 60 ವರ್ಷವರೆಗಿನ ವಯೋಮಿತಿಯವರಾಗಿರಬೇಕು.

2) ಬುದ್ಧಿಮಾಂದ್ಯ ವ್ಯಕ್ತಿಗಳ ತಂದೆ/ತಾಯಿ/ಪೋಷಕರಿಗೆ ರೂ.20,000-00ಗಳಿಗೆ ವಿಮೆ ಮಾಡಿಸತಕ್ಕದ್ದು.

3) ವಿಮೆಯ ಮೊತ್ತವು ಬುದ್ಧಿಮಾಂದ್ಯ ವ್ಯಕ್ತಿಗಳ ತಂದೆ/ತಾಯಿ/ಪೋಷಕರ ನಿಧನದ ನಂತರ ಮಾಸಿಕ ಧನದ ರೂಪದಲ್ಲಿ ಬುದ್ಧಿಮಾಂದ್ಯ ವ್ಯಕ್ತಿಗಳಿಗೆ ಅವರ ಮತ್ತೋರ್ವ ಪೋಷಕರ ಮುಖಾಂತರ ಜೀವ ವಿಮಾ ನಿಗಮವು ಪಾವತಿ ಮಾಡುತ್ತದೆ.

4) ವಿಮೆಯ ಮೊತ್ತವನ್ನು ಮಾಸಿಕ ಧನದ ರೂಪದಲ್ಲಿ ಬುದ್ಧಿಮಾಂದ್ಯ ವ್ಯಕ್ತಿಗಳ ನಿಧನದವರೆಗೆ ಜೀವ ವಿಮಾ ನಿಗಮವು ನೀಡತಕ್ಕದ್ದು.

5) ವಾರ್ಷಿಕ ವಿಮಾ ಕಂತನ್ನು ಬುದ್ಧಿಮಾಂದ್ಯ ವ್ಯಕ್ತಿಗಳ ತಂದೆ/ತಾಯಿ/ಪೋಷಕರ ವಯಸ್ಸಿನ ಆಧಾರದ ಮೇಲೆ ಭಾರತೀಯ ಜೀವ ವಿಮಾ ನಿಗಮವು ಲೆಕ್ಕಾಚಾರ ಮಾಡುತ್ತದೆ. ಅಂಗವಿಕಲರ ಕಲ್ಯಾಣ ಇಲಾಖೆಯು ಸದರಿ ವಾರ್ಷಿಕ ವಿಮಾ ಕಂತನ್ನು ಭಾರತೀಯ ಜೀವ ವಿಮಾ ನಿಗಮಕ್ಕೆ ನಿಗದಿತ ದಿನಾಂಕದೊಳಗೆ ಪಾವತಿ ಮಾಡಿ ನವೀಕರಿಸತಕ್ಕದ್ದು.

6) ಅಂಗವಿಕಲರ ಕಲ್ಯಾಣ ಇಲಾಖೆಯು ಈ ಯೋಜನೆಯ ವ್ಯಾಪ್ತಿಯೊಳಗೆ ಬರುವ ಬುದ್ಧಿಮಾಂದ್ಯ ವ್ಯಕ್ತಿಗಳ ತಂದೆ/ತಾಯಿ/ಪೋಷಕರ ಹೆಸರು, ಜನ್ಮ ದಿನಾಂಕ ಮತ್ತು ನಾಮ ನಿರ್ದೇಶನ ವ್ಯಕ್ತಿಗಳ ಹೆಸರು ಮುಂತಾದ ವಿವರಗಳ ಪಟ್ಟಿಯನ್ನು ಭಾರತೀಯ ಜೀವ ವಿಮಾ ನಿಗಮಕ್ಕೆ ಒದಗಿಸತಕ್ಕದ್ದು.

7) ವಿಮಾ ಸೌಲಭ್ಯದ ನವೀಕರಣ ಮಾಡುವ ಸಲುವಾಗಿ ಅಂಗವಿಕಲರ ಕಲ್ಯಾಣ ಇಲಾಖೆಯು ವಿಮಾ ಸೌಲಭ್ಯವನ್ನು ಪಡೆದಿರುವವರ ಪಟ್ಟಿಗೆ ಹೊಸದಾಗಿ ಸೇರುವವರ ಮತ್ತು ಪಟ್ಟಿಯಿಂದ ಕೈಬಿಡಬೇಕಾದವರ ವಿವರಗಳನ್ನು ಭಾರತೀಯ ಜೀವ ವಿಮಾ ನಿಗಮಕ್ಕೆ ಒದಗಿಸತಕ್ಕದ್ದು.

8) ಬುದ್ಧಿಮಾಂದ್ಯ ವ್ಯಕ್ತಿಗಳ ತಂದೆ/ತಾಯಿ/ಪೋಷಕರ ನಿಧನದ ನಂತರ ಬುದ್ಧಿಮಾಂದ್ಯ ವ್ಯಕ್ತಿಗಳಿಗೆ ವರ್ಷಾಸನವನ್ನು ಮಾಸಿಕವಾಗಿ ಅವರುಗಳ ವಯಸ್ಸಿನ ಆಧಾರದ ಮೇಲೆ ಲೆಕ್ಕಾಚಾರ ಮಾಡಿ ಭಾರತೀಯ ಜೀವ ವಿಮಾ ನಿಗಮವು ಪಾವತಿ ಮಾಡುತ್ತಿದೆ.

9) ಈ ಯೋಜನೆಯು ಜಾರಿಯಲ್ಲಿ ತೊಡಕುಗಳು ಕಂಡುಬಂದಲ್ಲಿ ಭಾರತೀಯ ಜೀವ ವಿಮಾ ನಿಗಮದೊಂದಿಗೆ ಚರ್ಚಿಸಿ ಯೋಜನೆಯಲ್ಲಿನ ಕಂಡಿಕೆಗಳನ್ನು ಸೂಕ್ತವಾಗಿ ಮಾರ್ಪಾಡುಮಾಡುವ ಅಧಿಕಾರವನ್ನು ನಿರ್ದೇಶಕರು, ಅಂಗವಿಕಲರ ಕಲ್ಯಾಣ ಇಲಾಖೆ, ಬೆಂಗಳೂರು ಇವರು ಹೊಂದಿರುತ್ತಾರೆ.

1996-97ನೇ ಸಾಲಿನಲ್ಲಿ ಮೇಲ್ಕಂಡ ಯೋಜನೆಗೆ ತಗಲುವ ರೂ. 10000-00ಗಳ ವೆಚ್ಚವನ್ನು ಲೆಕ್ಕಶೀರ್ಷಿಕೆ "2235-02-101-0-16 (ಯೋಜನೆ)" ಯಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಯೋಜನಾ ಇಲಾಖೆ ಹಾಗೂ ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಪಿಡಿ 124 ಪಿಟಿಪಿ 96 ದಿನಾಂಕ 27-8-96 ಹಾಗೂ ಎಫ್.ಡಿ 1134 ಆರ್ಥಿಕ-3/96 ದಿನಾಂಕ 16-1-97ರ (ಅನುಕ್ರಮವಾಗಿ) ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಸಹಿ/-

(ಗೀತಾ ರಮೇಶ್)

ಸರ್ಕಾರದ ಅಧೀನ ಕಾರ್ಯದರ್ಶಿ

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ:– ವಿಕಲಚೇತನರ ವ್ಯಕ್ತಿಗಳೊಡನೆ ವಿವಾಹ ಏರ್ಪಡುವ ಪ್ರಕರಣಗಳಲ್ಲಿ, ಉನ್ನತ ಶಿಕ್ಷಣ ಪಡೆಯುವ ವಿಕಲಚೇತನರಿಗೆ ಉನ್ನತ ಶಿಕ್ಷಣ ಹಾಗೂ ತಾಂತ್ರಿಕ ಶಿಕ್ಷಣದ ಶುಲ್ಕವನ್ನು ಮರುಪಾವತಿ ಮಾಡುವ ಬಗ್ಗೆ

ಓದಲಾಗಿದೆ: ನಿರ್ದೇಶಕರು, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ,ಬೆಂಗಳೂರು ಇವರ ಪತ್ರ ಸಂಖ್ಯೆ:ವಿಹಿನಾಸಇ/ಯೋಜನೆ/ಉಶಿಶುಮ/12/ 2013-14/1366, ದಿನಾಂಕ: 24-7-2013.

ಪ್ರಸ್ತಾವನೆ:

ಮೇಲೆ ಓದಲಾದ ದಿನಾಂಕ: 24-7-2013ರ ಪತ್ರದಲ್ಲಿ, ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರು, ಮಾನ್ಯ ಮುಖ್ಯ ಮಂತ್ರಿಯವರು ದಿನಾಂಕ:12-7-2013ರಂದು ಮಂಡಿಸಿರುವ 2013-14ನೇ ಸಾಲಿನ ಆಯವ್ಯಯ ಭಾಷಣದ ಕ್ರಮಸಂಖ್ಯೆ: 230ರಲ್ಲಿ, 'ವಿಕಲಚೇತನರ ವ್ಯಕ್ತಿಗಳೊಡನೆ ವಿವಾಹ ಏರ್ಪಡುವ ಪ್ರಕರಣಗಳಲ್ಲಿ, ವಿಕಲಚೇತನರಿಗೆ ಉನ್ನತ ಶಿಕ್ಷಣ/ತಾಂತ್ರಿಕ ಶಿಕ್ಷಣದ ಶುಲ್ಕವನ್ನು ಹಿಂಬರಿಸಲಾಗುವುದು' ಎಂದು ಘೋಷಿಸಿರುತ್ತಾರೆ.

2001ರ ಜನಗಣತಿಯ ಪ್ರಕಾರ 9,40,643 ವಿಕಲಚೇತನರಿದ್ದು, ಅವರಲ್ಲಿ 15 ರಿಂದ 26ರ ವಯೋಮಾನದ ಸುಮಾರು 3.00 ಲಕ್ಷ ವಿಕಲಚೇತನರು ಇರುತ್ತಾರೆಂದು ಅಂದಾಜಿಸಲಾಗಿದೆ. ಇವರುಗಳು ಎಸ್.ಎಸ್.ಎಲ್.ಸಿ ನಂತರದ ಶಿಕ್ಷಣ, ಉನ್ನತ ಶಿಕ್ಷಣ, ತಾಂತ್ರಿಕ ಶಿಕ್ಷಣ, ವೈದ್ಯಕೀಯ ಶಿಕ್ಷಣ ಮತ್ತು ಔದ್ಯೋಗಿಕ ಶಿಕ್ಷಣಗಳಲ್ಲಿ ವ್ಯಾಸಂಗ ಮಾಡಲು ಪ್ರತಿಭಾವಂತರಾಗಿದ್ದರೂ ಸಹ ಸರ್ಕಾರವು ನಿಗದಿಪಡಿಸಿರುವ ಶುಲ್ಕವನ್ನು ಭರಿಸಲು ಶಕ್ತರಿಲ್ಲದ ಕಾರಣ ಉನ್ನತ ಶಿಕ್ಷಣವನ್ನು ಮುಂದುವರೆಸಲು ಸಾಧ್ಯವಾಗದೇ ಶಿಕ್ಷಣದಿಂದ ವಂಚಿತರಾಗುತ್ತಿದ್ದಾರೆ. ಈ ದಿಸೆಯಲ್ಲಿ ಪ್ರತಿಭಾವಂತ ವಿಕಲಚೇತನರನ್ನು ಉನ್ನತ ಶಿಕ್ಷಣ, ವೈದ್ಯಕೀಯ ಶಿಕ್ಷಣ, ತಾಂತ್ರಿಕ ಶಿಕ್ಷಣ ಹಾಗೂ ಔದ್ಯೋಗಿಕ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಿ, ಸದರಿ ವ್ಯಾಸಂಗಕ್ಕೆ ಸರ್ಕಾರವು ವಿಧಿಸುವ ಶುಲ್ಕವನ್ನು ಮರು ಪಾವತಿ ಮಾಡುವುದರ ಮೂಲಕ ವಿಕಲಚೇತನ ವಿದ್ಯಾರ್ಥಿಗಳು ಸಹ ಸಾಮಾನ್ಯ ವಿದ್ಯಾರ್ಥಿಗಳಂತೆ ವಿದ್ಯಾಭ್ಯಾಸ ಮಾಡಲು ಸಹಕರಿಸುವುದು ಸೂಕ್ತವೆಂದು ಅಭಿಪ್ರಾಯ ಪಟ್ಟಿರುವುದಾಗಿ ತಿಳಿಸಿರುತ್ತಾರೆ.

ಮುಂದುವರೆದು, ಅದರಂತೆ 2013-14 ನೇ ಸಾಲಿನಲ್ಲಿ ಎಸ್.ಎಸ್.ಎಲ್.ಸಿ ನಂತರ ಉನ್ನತ ಶಿಕ್ಷಣ, ವೃತ್ತಿ ಶಿಕ್ಷಣ, ತಾಂತ್ರಿಕ ಶಿಕ್ಷಣ ಮತ್ತು ಔದ್ಯೋಗಿಕ ಶಿಕ್ಷಣಗಳಿಗೆ ಆಯ್ಕೆಯಾಗುವ ಅಂದಾಜು 4000 ವಿದ್ಯಾರ್ಥಿಗಳಿಗೆ ಸರ್ಕಾರವು ನಿಗದಿ ಪಡಿಸಿರುವ ಪರೀಕ್ಷಾ ಶುಲ್ಕ, ಬೋಧನಾ ಶುಲ್ಕ, ಪ್ರಯೋಗಾಲಯ ಶುಲ್ಕ, ಕ್ರೀಡಾಶುಲ್ಕ ಹಾಗೂ ಗ್ರಂಥಾಲಯ ಶುಲ್ಕಗಳನ್ನು ಮರುಪಾವತಿಸಲು ರೂ.256.08 ಲಕ್ಷಗಳ ಅನುದಾನದ ಅಗತ್ಯತೆ ಇದ್ದು, ಸದರಿ ಆಯವ್ಯಯವನ್ನು ಲೆಕ್ಕ ಶೀರ್ಷಿಕೆ :2235-02-101-0-05 ಯೋಜನೆ ಉಪಲೆಕ್ಕಶೀರ್ಷಿಕೆ 117 ವಿದ್ಯಾರ್ಥಿವೇತನದಡಿ ಒದಗಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 271 ಪಿಹೆಚ್‌ಪಿ 2013, ಬೆಂಗಳೂರು**

**ದಿನಾಂಕ: 03-09-2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ವಿಕಲಚೇತನ ವ್ಯಕ್ತಿಗಳೊಡನೆ ವಿವಾಹ ಏರ್ಪಡುವ ಪ್ರಕರಣಗಳಲ್ಲಿ, ಉನ್ನತ ಶಿಕ್ಷಣ ಪಡೆಯುವ ವಿಕಲಚೇತನರಿಗೆ 2013-14 ನೇ ಸಾಲಿನಲ್ಲಿ ಎಸ್.ಎಸ್.ಎಲ್.ಸಿ ನಂತರ ಉನ್ನತ ಶಿಕ್ಷಣ, ವೃತ್ತಿ ಶಿಕ್ಷಣ, ತಾಂತ್ರಿಕ ಶಿಕ್ಷಣ, ಸ್ನಾತಕೋತ್ತರ ಮತ್ತು ಔದ್ಯೋಗಿಕ ಶಿಕ್ಷಣಗಳಿಗೆ

..2

ನಿಯಮಾನುಸಾರ ಆಯ್ಕೆಯಾಗುವ ವಿದ್ಯಾರ್ಥಿಗಳಿಗೆ ಸರ್ಕಾರವು ನಿಗದಿ ಪಡಿಸಿರುವ ಪರೀಕ್ಷಾ ಶುಲ್ಕ, ಬೋಧನಾ ಶುಲ್ಕ, ಪ್ರಯೋಗಾಲಯ ಶುಲ್ಕ, ಕ್ರೀಡಾ ಶುಲ್ಕ ಹಾಗೂ ಗ್ರಂಥಾಲಯ ಶುಲ್ಕಗಳನ್ನು ಮರುಪಾವತಿಸುವ ಯೋಜನೆಗೆ, ಬೇರೆ ಇಲಾಖೆ ಹಾಗೂ ಇತರೆ ಮೂಲಗಳಿಂದ ಶುಲ್ಕವನ್ನು ಮರು ಪಾವತಿ ಪಡೆದ ವಿದ್ಯಾರ್ಥಿಗಳಿಗೆ ಈ ಯೋಜನೆಯಡಿ ಶುಲ್ಕ ಮರುಪಾವತಿಗೆ ಅವಕಾಶವಿರುವುದಿಲ್ಲವೆಂಬ ಷರತ್ತಿಗೆ ಒಳಪಟ್ಟು ಹಾಗೂ ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ.

ಈ ಯೋಜನೆಗೆ ಸಂಬಂಧಿಸಿದಂತೆ ವಿದ್ಯಾರ್ಥಿಗಳಿಂದ ಅರ್ಜಿ ಸ್ವೀಕರಿಸಿದ ನಂತರ ಅನುದಾನ ಒದಗಿಸುವ ಬಗ್ಗೆ ಪ್ರತ್ಯೇಕ ಪ್ರಸ್ತಾವನೆಯನ್ನು ಸಲ್ಲಿಸತಕ್ಕದ್ದು. ಈ ಯೋಜನೆಯ ಅನುಷ್ಠಾನ ಸಂಬಂಧ ವಿಧಿಸಬಹುದಾದ ಷರತ್ತುಗಳು ಹಾಗೂ ಮಾರ್ಗಸೂಚಿಗಳ ವಿವರಗಳನ್ನು ಅನುಬಂಧ -1 ರಲ್ಲಿ ಹಾಗೂ ಶುಲ್ಕ ಮರುಪಾವತಿಯ ಅರ್ಜಿ ನಮೂನೆಯನ್ನು ಕ್ರಮವಾಗಿ ಅನುಬಂಧ -2 ರಲ್ಲಿ ನೀಡಿದೆ.

ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯು ಉದ್ದೇಶಿತ ಗುಂಪುಗಳಿಗೆ ಈ ಯೋಜನೆ ಕುರಿತಂತೆ ವ್ಯಾಪಕ ಪ್ರಚಾರ ಕೈಗೊಳ್ಳುವುದು ಹಾಗೂ ಇಬ್ಬಗೆಯ ವಹಿ (Duplicity) ತಪ್ಪಿಸಲು ಸೂಕ್ತ ಕ್ರಮ ತೆಗೆದುಕೊಳ್ಳತಕ್ಕದ್ದು.

ಈ ಆದೇಶವನ್ನು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಿ 38 ಪಿಎಂಎಂ 2013, ದಿನಾಂಕ: 17-8-2013 ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ ಆಇ 560 ವೆಚ್ಚ-3 2013, ದಿನಾಂಕ: 31-8-2013ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

---

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಬಿ.ಕಮಲಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ.

ಇವರಿಗೆ:

1) ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು
2) ನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ಬೆಂಗಳೂರು.
3) ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಗೋಪುರ, ಬೆಂಗಳೂರು.
4) ಎಲ್ಲಾ ಜಿಲ್ಲಾಧಿಕಾರಿಗಳು. (ನಿರ್ದೇಶಕರ ಮುಖಾಂತರ)
5) ಎಲ್ಲಾ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು,ಜಿಲ್ಲಾ ಪಂಚಾಯತ್. (ನಿರ್ದೇಶಕರ ಮುಖಾಂತರ)
6) ಖಜಾನಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ.
7) ಶಾಖಾ ರಕ್ಷಾ ಕಡತ/ ಹೆಚ್ಚುವರಿ ಪ್ರತಿಗಳು.

ಪ್ರತಿ:

1) ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವೆಚ್ಚ 3), ವಿಧಾನಸೌಧ, ಬೆಂಗಳೂರು.
2) ಆಪ್ತ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಹಾಗೂ ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು.
3) ಆಪ್ತಕಾರ್ಯದರ್ಶಿ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು.

ಸರ್ಕಾರದ ಆದೇಶ ಸಂಖ್ಯೆ: ಮಮಇ 271 ಪಿಹೆಚ್‌ಪಿ 2013, ದಿನಾಂಕ: 3-9-2013 ಕ್ಕೆ ಅನುಬಂಧ-1

## ಷರತ್ತುಗಳು

1. ವಿಕಲಚೇತನರು ಭಾರತದ ಪ್ರಜೆಯಾಗಿದ್ದು, ಅರ್ಜಿ ಸಲ್ಲಿಸುವ ದಿನಾಂಕಕ್ಕೆ ಕನಿಷ್ಠ 5 ವರ್ಷ ಕರ್ನಾಟಕದಲ್ಲಿ ವ್ಯಾಸಂಗ ಮಾಡಿರತಕ್ಕದ್ದು.
2. ಸರ್ಕಾರಿ, ಸ್ಥಳೀಯ ಸಂಸ್ಥೆ, ಅನುದಾನಿತ ಸಂಸ್ಥೆ, ಸರ್ಕಾರದ ಮಾನ್ಯತೆ ಪಡೆದ ಅನುದಾನ ಸಹಿತ ಮತ್ತು ಅನುದಾನ ರಹಿತ ಖಾಸಗಿ ಸಂಸ್ಥೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ಎಸ್.ಎಸ್.ಎಲ್.ಸಿ ನಂತರದ ವಿಕಲಚೇತನ ವಿದ್ಯಾರ್ಥಿಗಳು ಶುಲ್ಕ ಮರು ಪಾವತಿ ಪಡೆಯಲು ಅರ್ಹರಿರುತ್ತಾರೆ.
3. ಯಾವ ಸಂಸ್ಥೆಗಳು ವಿಕಲಚೇತನ ವಿದ್ಯಾರ್ಥಿಗಳಿಂದ ಶುಲ್ಕವನ್ನು ವಿಧಿಸುವುದಿಲ್ಲವೋ ಅಂತಹ ಸಂಸ್ಥೆಯ ವಿದ್ಯಾರ್ಥಿಗಳು ಶುಲ್ಕು ಮರುಪಾವತಿಗೆ ಅರ್ಹರಿರುವುದಿಲ್ಲ.
4. ವಿಕಲಚೇತನರ ವಿದ್ಯಾರ್ಥಿಗಳು ಹಿಂದಿನ ವರ್ಷದ ಪಬ್ಲಿಕ್ ಪರೀಕ್ಷೆಯಲ್ಲಿ ಎಲ್ಲಾ ವಿಷಯಗಳಲ್ಲಿ ಉತ್ತೀರ್ಣರಾಗದಿದ್ದಲ್ಲಿ ಮುಂದಿನ ವರ್ಷದಲ್ಲಿ ಶುಲ್ಕ ಮರುಪಾವತಿಗೆ ಅರ್ಹರಾಗುವುದಿಲ್ಲ. ಆದರೆ, ಮುಂದಿನ ಶೈಕ್ಷಣಿಕ ವರ್ಷದಲ್ಲಿ ಹಿಂದಿನ ಬಾಕಿ ವಿಷಯಗಳು ಸೇರಿದಂತೆ ಎಲ್ಲಾ ವಿಷಯಗಳಲ್ಲಿ ಉತ್ತೀರ್ಣರಾಗಿದ್ದಲ್ಲಿ ಮಾತ್ರ ನಂತರದ ವರ್ಷದಲ್ಲಿ ಶುಲ್ಕ ಮರುಪಾವತಿಗೆ ಅರ್ಹರಾಗುತ್ತಾರೆ. ಆ. ಕೋರ್ಸ್‌ಗಳಲ್ಲಿ ಕ್ಯಾರಿ ಓವರ್ ಪದ್ಧತಿ ಜಾರಿಯಿದ್ದು ಮುಂದಿನ ತರಗತಿಗೆ/ವರ್ಷಕ್ಕೆ ಪ್ರವೇಶ ಅವಕಾಶವಿದ್ದಲ್ಲಿ ಅಂತಹವರು ಶುಲ್ಕ ಮರುಪಾವತಿಗೆ ಅರ್ಹರಿರುತ್ತಾರೆ.
5. ಪರೀಕ್ಷಾ ಶುಲ್ಕವನ್ನು ವರ್ಷಕ್ಕೆ ಒಂದು ಸಲ ಮಾತ್ರ ಮರುಪಾವತಿಸಲಾಗುವುದು. ಅನುತ್ತೀರ್ಣರಾದ ಅಭ್ಯರ್ಥಿಗಳು ಹಾಗೂ ಸಪ್ಲಿಮೆಂಟರಿ ಪರೀಕ್ಷೆ ತೆಗೆದುಕೊಳ್ಳುವ ಅಭ್ಯರ್ಥಿಗಳು ಶುಲ್ಕ ಮರುಪಾವತಿಗೆ ಅರ್ಹರಾಗುವುದಿಲ್ಲ.
6. ಬೇರೆ ಇಲಾಖೆ ಹಾಗೂ ಇತರೆ ಮೂಲಗಳಿಂದ ಶುಲ್ಕವನ್ನು ಪಡೆದ ವಿದ್ಯಾರ್ಥಿಗಳಿಗೆ ಈ ಯೋಜನೆಯಡಿ ಶುಲ್ಕ ಮರುಪಾವತಿಗೆ ಅವಕಾಶವಿರುವುದಿಲ್ಲ.
7. ಯೋಜನೆಯಡಿ ಸೌಲಭ್ಯ ಪಡೆಯುವ ವಿದ್ಯಾರ್ಥಿಗಳಿಗೆ ಯಾವುದೇ ಆದಾಯ ಮಿತಿ ಇರುವುದಿಲ್ಲ.
8. ಸರ್ಕಾರ ಅನುಬಂಧ-1 ರಂತೆ ನಿಗದಿಪಡಿಸಿರುವ ಮೊತ್ತ, ಇದರಲ್ಲಿ ಯಾವುದು ಗರಿಷ್ಠ ಮೊತ್ತಕ್ಕೆ ವಿವಿಧ ಕೋರ್ಸ್‌ಗಳಿಗೆ ಸೀಮಿತಗೊಳಿಸಬಹುದಾಗಿದೆ.
9. ಕಾಲೇಜಿನ ಪ್ರಾಂಶುಪಾಲರು/ಮುಖ್ಯಸ್ಥರ ಮೂಲಕ ಕೋರಿಕೆ ಅರ್ಜಿಯನ್ನು ಅವರ ಶಿಫಾರಸ್ಸಿನೊಂದಿಗೆ ಸಲ್ಲಿಸತಕ್ಕದ್ದು.
10. ಶುಲ್ಕವನ್ನು ಮರುಪಾವತಿ ಮಾಡುವ ಪ್ರಾಧಿಕಾರವು ಆಯಾ ಜಿಲ್ಲೆಯ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳದ್ದಾಗಿರುತ್ತದೆ.
11. ಫಲಾನುಭವಿಗಳ ಹೆಸರಿನ ಬ್ಯಾಂಕ್ ಖಾತೆಗೆ ನೇರವಾಗಿ IFSC/NEFT ಮೂಲಕ ಮರುಪಾವತಿ ಶುಲ್ಕವನ್ನು ವರ್ಗಾವಣೆ ಮಾಡತಕ್ಕದ್ದು. ಅನುಷ್ಠಾನಗೊಳಿಸಲು ಸಾಧ್ಯವಾಗದ ಪಕ್ಷದಲ್ಲಿ ಮಾತ್ರ ಇಲಾಖಾ ನಿರ್ದೇಶಕರ ಪೂರ್ವಾನುಮತಿಯೊಡನೆ ಚೆಕ್ ಮೂಲಕ ವಿತರಿಸಬಹುದು.
12. ವಿದ್ಯಾರ್ಥಿಯು ವ್ಯಾಸಂಗ ಮಾಡುವ ಅವಧಿಯಲ್ಲಿ 2ನೇ ವರ್ಷದಿಂದ ನೀಡುವಾಗ ಹಿಂದಿನ ವರ್ಷದಲ್ಲಿ ಕನಿಷ್ಠ ಶೇ.80ರಷ್ಟು ಹಾಜರಾತಿ ಹೊಂದಿರಬೇಕು.
13. ಅಂಗವಿಕಲರ ಅಧಿನಿಯಮದಲ್ಲಿ ಸೂಚಿಸಿರುವ ಹಾಗೂ ವೈದ್ಯಕೀಯ ಮಂಡಳಿಯವರು ಶಿಫಾರಸ್ಸು ಮಾಡಿರುವ ವೈದ್ಯಕೀಯ ಪ್ರಮಾಣದಲ್ಲಿ ಸೂಚಿಸಿರುವ ವಿಕಲಚೇತನ ಅಭ್ಯರ್ಥಿಗಳು ಮಾತ್ರ ಯೋಜನೆಗೆ ಅರ್ಹರಿರುತ್ತಾರೆ.

(ಬಿ.ಕಮಲಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ.

233

# ಕರ್ನಾಟಕ ಸರ್ಕಾರದ ನಡವಳಿಗಳು

**ವಿಷಯ:** 2020-21ನೇ ಸಾಲಿನಲ್ಲಿ ಘೋಷಣೆಯಾಗಿರುವ ಅಂಧ ತಾಯಂದಿರಿಗೆ ನೀಡಲಾಗುತ್ತಿರುವ ಮಾಸಿಕ ರೂ.2000/-ಗಳ ಶಿಶುಪಾಲನಾ ಭತ್ಯೆಯನ್ನು ಮಗುವಿನ ಮೊದಲ ಐದು ವರ್ಷದವರೆಗೆ ವಿತರಿಸುವ ಯೋಜನೆಗೆ ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ನಿರ್ದೇಶನಾಲಯದ ಪತ್ರ ಸಂಖ್ಯೆ: ವಿಹಿನಿ/ಅವ್ಯಯೋ/ ಸಿ.10/58/2020-21/936, ದಿ:04.09.2020

**ಪ್ರಸ್ತಾವನೆ:**

2020-21ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ-134ರಲ್ಲಿ "ಅಂಧ ತಾಯಂದಿರಿಗೆ ಮಾಸಿಕ 2000 ರೂ.ಗಳಂತೆ ಶಿಶುಪಾಲನಾ ಭತ್ಯೆಯನ್ನು ರಾಜ್ಯ ಸರ್ಕಾರವು ಮಗುವಿನ ಮೊದಲ ಎರಡು ವರ್ಷದವರೆಗೆ ನೀಡುತ್ತಿದೆ. ಈ ಭತ್ಯೆಯನ್ನು ಮಕ್ಕಳ ಮೊದಲ ಐದು ವರ್ಷದವರೆಗೆ ನೀಡಲಾಗುವುದೆಂದು" ಮಾನ್ಯ ಮುಖ್ಯಮಂತ್ರಿಯವರು ಘೋಷಿಸಿರುವಂತೆ ಈ ಭತ್ಯೆಯನ್ನು ಮಕ್ಕಳ ಮೊದಲ ಐದು ವರ್ಷದವರೆಗೆ ನೀಡಲು 2020-21ನೇ ಸಾಲಿನ ಲೆಕ್ಕ ಶೀರ್ಷಿಕೆ 2235-02-101-0-99ರಡಿಯಲ್ಲಿ ಒದಗಿಸಿರುವ ಆಯವ್ಯಯದಲ್ಲಿ ಭರಿಸಲು ಆಡಳಿತಾತ್ಮಕ ಮಂಜೂರಾತಿ ನೀಡಿ ಆದೇಶ ಹೊರಡಿಸುವಂತೆ ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ನಿರ್ದೇಶನಾಲಯರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಮಮಇ 208 ಪಿಹೆಚ್ ಪಿ 2020, ಬೆಂಗಳೂರು, ದಿ:16.10.2020**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2020-21ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ-134ರಲ್ಲಿ "ಅಂಧ ತಾಯಂದಿರಿಗೆ ಮಾಸಿಕ ರೂ.2000/-ಗಳಂತೆ ಶಿಶುಪಾಲನಾ ಭತ್ಯೆಯನ್ನು ರಾಜ್ಯ ಸರ್ಕಾರವು ಮಗುವಿನ ಮೊದಲ ಎರಡು ವರ್ಷದವರೆಗೆ ನೀಡುತ್ತಿದೆ. ಈ ಭತ್ಯೆಯನ್ನು ಮಕ್ಕಳ ಮೊದಲ ಐದು ವರ್ಷದವರೆಗೆ ನೀಡಲಾಗುವುದು" ಎಂಬ ಘೋಷಣೆಗೆ ಆಡಳಿತಾತ್ಮಕ ಮಂಜೂರಾತಿ ನೀಡಿದೆ ಹಾಗೂ ಸದರಿ ಯೋಜನೆಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ:2235-02-101-0-99-100 ಸಹಾಯಾನುದಾನದಡಿಯಲ್ಲಿ ಒದಗಿಸಲಾಗಿರುವ ಅನುದಾನದಿಂದ ಭರಿಸಿಕೊಳ್ಳಲು ಹಾಗೂ ಮಾರ್ಗಸೂಚಿಯನ್ವಯ ನಿಯಮಾನುಸಾರವಾಗಿ ಮತ್ತು ಪಾರದರ್ಶಕತೆಯನ್ವಯ ಅನುಷ್ಠಾನಗೊಳಿಸುವ ಷರತ್ತಿಗೊಳಪಟ್ಟು ಅನುಮೋದನೆ ನೀಡಿದೆ.

ಈ ಆದೇಶವನ್ನು ಕ್ರಮವಾಗಿ ಆರ್ಥಿಕ ಇಲಾಖೆಯ ಹಾಗೂ ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 317 ವೆಚ್ಚ-10/2020, ದಿ:01.10.2020 ಹಾಗೂ ಪಿಡಿಎಸ್ 30 ಐಎಂಎಂ 2020, ದಿ:14.10.2020ರಲ್ಲಿನ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ

G. H. Sarojamma 16/10/2020
(ಜಿ. ಹೆಚ್. ಸರೋಜಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ-2
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ

**ಪ್ರತಿಗಳು:**

1. ಪ್ರಧಾನ ಮಹಾಲೇಖಪಾಲರು (ಜಿ & ಎಸ್ ಎಸ್ ಎ), ಕರ್ನಾಟಕ, ಹೊಸ ಕಟ್ಟಡ, ಆಡಿಟ್ ಭವನ, ಅಂಚೆ ಪೆಟ್ಟಿಗೆ ಸಂಖ್ಯೆ: 5398, ಬೆಂಗಳೂರು- 1.

2. ಪ್ರಧಾನ ಮಹಾಲೇಖಪಾಲರು (ಇ & ಆರ್ ಎಸ್ ಎ), ಕರ್ನಾಟಕ, ಹೊಸ ಕಟ್ಟಡ, ಆಡಿಟ್ ಭವನ, ಅಂಚೆ ಪೆಟ್ಟಿಗೆ ಸಂಖ್ಯೆ: 5398, ಬೆಂಗಳೂರು- 1.
3. ಪ್ರಧಾನ ಮಹಾಲೇಖಪಾಲರು (ಎ&ಇ), ಕರ್ನಾಟಕ, ಪಾರ್ಕ್ ಹೌಸ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ:5329, ಬೆಂಗಳೂರು- 1.
4. ನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ಬೆಂಗಳೂರು.
5. ನಿರ್ದೇಶಕರು, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ನಿರ್ದೇಶನಾಲಯ, ವಿ.ವಿ.ಗೋಪುರ, ಪೋಡಿಯಂ ಬ್ಲಾಕ್, ಡಾ|| ಅಂಬೇಡ್ಕರ್ ವೀದಿ, ಬೆಂಗಳೂರು-01.
6. ಆಂತರಿಕ ಆರ್ಥಿಕ ಸಲಹೆಗಾರರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು.
7. ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನಸೌಧ, ಬೆಂಗಳೂರು.
8. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿರವರ ಆಪ್ತ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು.
9. ಸರ್ಕಾರದ ಜಂಟಿ ಕಾರ್ಯದರ್ಶಿರವರ ಆಪ್ತ ಸಹಾಯಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು
10. ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವೆಚ್ಚ-10) ವಿಧಾನಸೌಧ, ಬೆಂಗಳೂರು.
11. ಶಾಖಾಧಿಕಾರಿ, ಸ್ವೀಕೃತಿ ಮತ್ತು ರವಾನೆ ಶಾಖೆ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಬಹುಮಹಡಿಗಳ ಕಟ್ಟಡ, ಬೆಂಗಳೂರು.
12. ಶಾಖಾ ರಕ್ಷಾ ಕಡತ/ಓ.ಡಿ.ಜಿ.ಸಿ/ಸೂಚನಾ ಫಲಕ/ಹೆಚ್ಚುವರಿ ಪ್ರತಿಗಳು.

# ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ:- ಬಡತನದ ರೇಖೆಗಿಂತ ಕೆಳಗಿರುವ ಕುಟುಂಬದಲ್ಲಿನ ದೃಷ್ಟಿಹೀನ ಮಹಿಳೆಯರಿಗೆ ಪ್ರತಿ ಹೆರಿಗೆಯ ನಂತರ 2 ವರ್ಷಗಳ ಅವಧಿಗೆ ಮಾಸಿಕ ರೂ.2000/- ಶಿಶುಪಾಲನಾ ಭತ್ಯೆ ನೀಡುವ ಬಗ್ಗೆ.

ಓದಲಾಗಿದೆ: ನಿರ್ದೇಶಕರು, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ,ಬೆಂಗಳೂರು ಇವರ ಪತ್ರ ಸಂಖ್ಯೆ:ವಿಹಿನಾಸಇ/ಯೋಜನೆ/ಅಂ.ಮ.ಅ.ಬ/II/ 2013-14/1364, ದಿನಾಂಕ: 24-7-2013.

ಪ್ರಸ್ತಾವನೆ:

ಮೇಲೆ ಓದಲಾದ ದಿನಾಂಕ: 24-7-2013ರ ಪತ್ರದಲ್ಲಿ, ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರು, ಮಾನ್ಯ ಮುಖ್ಯ ಮಂತ್ರಿಯವರು ದಿನಾಂಕ:12-7-2013ರಂದು ಮಂಡಿಸಿರುವ 2013-14ನೇ ಸಾಲಿನ ಆಯವ್ಯಯ ಭಾಷಣದ ಕ್ರಮಸಂಖ್ಯೆ: 231ರಲ್ಲಿ, 'ಬಡತನದ ರೇಖೆಗಿಂತ ಕೆಳಗಿರುವ ಕುಟುಂಬಗಳಲ್ಲಿನ ದೃಷ್ಟಿಹೀನ ಮಹಿಳೆಯರಿಗೆ 2 ಹೆರಿಗೆಯವರೆಗೆ ಪ್ರತಿ ಹೆರಿಗೆ ನಂತರ 2 ವರ್ಷ ಅವಧಿಗೆ ಆರೋಗ್ಯ ಹಾಗೂ ಪೌಷ್ಠಿಕ ಆಹಾರ ದೃಷ್ಟಿಯಿಂದ ತಿಂಗಳಿಗೆ ರೂ.2000/- ಗಳನ್ನು ಶಿಶುಪಾಲನ ಭತ್ಯೆಯನ್ನು ನೀಡಲಾಗುವುದೆಂದು' ಘೋಷಿಸಿರುತ್ತಾರೆ.

ನಿರ್ದೇಶಕರು, ವಿಕಲಚೇತನ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಬೆಂಗಳೂರು ಇವರು ಪ್ರಸ್ತಾವನೆಯ ಬಗ್ಗೆ ಆಯವ್ಯಯ ಭಾಷಣದಲ್ಲಿ ಬಡತನದ ರೇಖೆಗಿಂತ ಕೆಳಗಿರುವ ಕುಟುಂಬಗಳಲ್ಲಿನ ದೃಷ್ಟಿಹೀನ ಮಹಿಳೆಯರಿಗೆ ಎಂಬುದರ ಬದಲಾಗಿ ಬಡ ಕುಟುಂಬದಲ್ಲಿರುವ ದೃಷ್ಟಿಹೀನ ಮಹಿಳೆಯರಿಗೆ ಜನಿಸುವ ಮಕ್ಕಳಿಗೆ ಎಂದು ಬದಲಾಯಿಸಬಹುದೆಂದು ಅಭಿಪ್ರಾಯಡುತ್ತಾ, ಬಡಕುಟುಂಬದಲ್ಲಿ ಜನಿಸುವ ಮಕ್ಕಳ ಆರೈಕೆ, ಲಾಲನೆ, ಪೋಷಣೆ ಮಾಡುವ ಸಂಪೂರ್ಣ ಜವಾಬ್ದಾರಿಯು ತಾಯಿಯರದ್ದಾಗಿರುತ್ತದೆ. ಆದರೆ ದೃಷ್ಟಿದೋಷವುಳ್ಳ ಮಹಿಳೆಯರು ಅವರ ಸ್ವಂತ ಕೆಲಸ ಕಾರ್ಯಗಳನ್ನು ಮಾಡಿಕೊಳ್ಳಬೇಕಾದರೆ, ಎಲ್ಲಾ ಹಂತದಲ್ಲಿ ಇತರರನ್ನು ಅವಲಂಬಿಸಬೇಕಾದ ಅನಿವಾರ್ಯತೆ ಇರುತ್ತದೆ. ಅಂತಹ ಅಂಧ ಮಹಿಳೆಯರಿಗೆ ಜನಿಸುವ ಮಕ್ಕಳ ಆರೈಕೆ ಮಾಡಿ ಪಾಲನೆ ಪೋಷಣೆ ಮಾಡುವುದು ತುಂಬಾ ಕಷ್ಟದ ಕೆಲಸವಾಗಿದ್ದು, ಮಗುವಿನ ದೈನಂದಿನ ಚಟುವಟಿಕೆಗಳನ್ನು ಗಮನಿಸುವುದು ಇವರಿಂದ ಸಾಧ್ಯವಾಗದ ಕಾರಣ ಮಗು ಹುಟ್ಟಿದಾಗಿನಿಂದ ಕನಿಷ್ಠ 2 ವರ್ಷಗಳ ಅವಧಿವರೆಗೆ ಮಗುವಿನ ಆರೈಕೆ ಮಾಡಲು ಒಬ್ಬ ಸಹಾಯಕರ ಅವಶ್ಯಕತೆ ಇರುವುದಾಗಿ ತಿಳಿಸಿರುತ್ತಾರೆ.

ಮುಂದುವರೆದು, 2013-14 ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿರುವಂತೆ ಬಡತನ ರೇಖೆಗಿಂತ ಕೆಳಗಿರುವ ಅಂಧ ಮಹಿಳೆಯರಿಗೆ 2 ಹೆರಿಗೆಗಳವರೆಗೆ, ಪ್ರತಿ ಹೆರಿಗೆಯ ನಂತರ 2 ವರ್ಷಗಳ ಅವಧಿಗೆ ಮಗುವಿನ ಆರೋಗ್ಯ ಮತ್ತು ಪೌಷ್ಠಿಕ ಆಹಾರ ಪೋಷಣೆಯ ದೃಷ್ಟಿಯಿಂದ ತಿಂಗಳಿಗೆ ರೂ.2000/- ಗಳ ಶಿಶುಪಾಲನ ಭತ್ಯೆಯನ್ನು 75 ಮಹಿಳೆಯರಿಗೆ ನೀಡಲು ಉದ್ದೇಶಿಸಿದ್ದು, ಯೋಜನೆಯ ಅನುಷ್ಠಾನಕ್ಕೆ ಆಡಳಿತಾತ್ಮಕ ಮಂಜೂರಾತಿ ನೀಡುವುದರ ಜೊತೆ ಪ್ರಸಕ್ತ ಸಾಲಿಗೆ ರೂ.18.00ಲಕ್ಷಗಳ ಆಯವ್ಯಯವನ್ನು ಲೆಕ್ಕಶೀರ್ಷಿಕೆ: 2235-02-101-0-52 ಯೋಜನೆ ಉಪ ಲೆಕ್ಕ ಶೀರ್ಷಿಕೆ 051 ಸಾಮಾನ್ಯ ವೆಚ್ಚಗಳಡಿ ಒದಗಿಸುವಂತೆ, ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 265 ಪಿಹೆಚ್‌ಪಿ 2013, ಬೆಂಗಳೂರು**

**ದಿನಾಂಕ:28-8-2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ವಾರ್ಷಿಕ ಆದಾಯ ರೂ.2.50 ಲಕ್ಷಗಳ (ಎರಡು ಲಕ್ಷದ ಐವತ್ತು ರೂಪಾಯಿಗಳು ಮಾತ್ರ) ಮಿತಿಯೊಳಗಿನ ಬಡಕುಟುಂಬಗಳ ದೃಷ್ಟಹೀನ ಮಹಿಳೆಯರಿಗೆ ಜನಿಸುವ ಮಕ್ಕಳಿಗೆ, 2 ಹೆರಿಗೆಯವರೆಗೆ ಪ್ರತಿ ಹೆರಿಗೆ ನಂತರ 2 ವರ್ಷ ಅವಧಿಗೆ ಆರೋಗ್ಯ ಹಾಗೂ ಪೌಷ್ಠಿಕ ಆಹಾರ ದೃಷ್ಟಿಯಿಂದ ತಿಂಗಳಿಗೆ ರೂ.2000/-ಗಳ ಶಿಶುಪಾಲನಾ ಭತ್ಯೆಯನ್ನು 75 ಮಹಿಳೆಯರಿಗೆ ನೀಡುವ ಯೋಜನೆಗೆ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಿದೆ.

ಈ ಯೋಜನೆಗೆ ಸಂಬಂಧಪಟ್ಟ ಷರತ್ತು ಹಾಗೂ ಮಾರ್ಗಸೂಚಿಗಳನ್ನು ಅನುಬಂಧ -1ರಲ್ಲಿ ಹಾಗೂ ಅರ್ಜಿ ನಮೂನೆಯನ್ನು ಅನುಬಂಧ -2ರಲ್ಲಿ ನೀಡಿದೆ. ಈ ಯೋಜನೆಗೆ ತಗಲುವ ವೆಚ್ಚವನ್ನು 2013-14ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2235-02-101-0-99 (ಯೋಜನೆ)ರಡಿಯಲ್ಲಿ ಒದಗಿಸಿರುವ ರೂ.800.00 ಲಕ್ಷಗಳ ಅನುದಾನದಿಂದಲೇ ಭರಿಸತಕ್ಕದ್ದು.

ಈ ಆದೇಶವನ್ನು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ:ಪಿಡಿ 39 ಐಎಂಎಂ 2013 ದಿನಾಂಕ:17.08.2013 ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 563 ವೆಚ್ಚ-3 2013, ದಿನಾಂಕ: 28-8-2013 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಬಿ.ಕಮಲಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ.

ಇವರಿಗೆ:

1) ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು
2) ನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ಬೆಂಗಳೂರು.
3) ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಗೋಪುರ, ಬೆಂಗಳೂರು.
4) ಎಲ್ಲಾ ಜಿಲ್ಲಾಧಿಕಾರಿಗಳು. (ನಿರ್ದೇಶಕರ ಮುಖಾಂತರ)
5) ಎಲ್ಲಾ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು,ಜಿಲ್ಲಾ ಪಂಚಾಯತ್. (ನಿರ್ದೇಶಕರ ಮುಖಾಂತರ)
6) ಖಜಾನಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ.
7) ಶಾಖಾ ರಕ್ಷಾ ಕಡತ/ ಹೆಚ್ಚವರಿ ಪ್ರತಿಗಳು.

## ಸರ್ಕಾರದ ಆದೇಶ ಸಂಖ್ಯೆ: ಮಮಇ 265 ಪಿಹೆಚ್‌ಪಿ 2013, ದಿನಾಂಕ: 28-8-2013 ಕ್ಕೆ ಅನುಬಂಧ-1

### ಅಂಧ ಮಹಿಳೆಯರಿಗೆ ಜನಿಸುವ ಮಕ್ಕಳ ಆರೈಕೆಗಾಗಿ ಶಿಶುಪಾಲನಾ ಭತ್ಯೆ ನೀಡಲು ಈ ಕೆಳಗಿನಂತೆ ಷರತ್ತು ಹಾಗೂ ಮಾರ್ಗಸೂಚಿ.

1. ವಿಕಲಚೇತನರು ಭಾರತದ ಪ್ರಜೆಯಾಗಿರಬೇಕು. ಅರ್ಜಿ ಸಲ್ಲಿಸಿದ ದಿನಾಂಕಕ್ಕೆ ಕನಿಷ್ಠ 6 ವರ್ಷಗಳು ಕರ್ನಾಟಕದಲ್ಲಿ ವಾಸವಾಗಿರಬೇಕು.
2. ಅಂಧ ಮಹಿಳೆಯ ವಯಸ್ಸು ಕನಿಷ್ಠ 18 ವರ್ಷಕ್ಕಿಂತ ಹೆಚ್ಚಾಗಿರಬೇಕು.
3. ಶಿಶು ಪಾಲನ ಭತ್ಯೆಯು 2 ಹೆರಿಗೆಗೆ ಮಾತ್ರ ಸೀಮಿತವಾಗಿರುತ್ತದೆ.
4. ಕಂದಾಯ ಇಲಾಖೆಯಿಂದ ಪಡೆಯಲಾದ ಆದಾಯ ಪ್ರಮಾಣಪತ್ರವನ್ನು ಕಡ್ಡಾಯವಾಗಿ ಸಲ್ಲಿಸತಕ್ಕದ್ದು. ಅವರುಗಳ ಕುಟುಂಬದ ವಾರ್ಷಿಕ ಆದಾಯ ರೂ.2.50 ಲಕ್ಷಗಳ ಒಳಗಿರಬೇಕು.
5. ಸಹಾಯಕ್ಕಾಗಿ ಬರುವ ವ್ಯಕ್ತಿಯಿಂದ ಶಿಶು ಲಾಲನೆ, ಪಾಲನೆ, ಆರೋಗ್ಯ ಹಾಗೂ ಪೌಷ್ಠಿಕ ಆಹಾರ ಒದಗಿಸುವ ಕುರಿತು ಮುಚ್ಚಳಿಕೆ ಪಡೆಯತಕ್ಕದ್ದು.
6. ಶಿಶು ಪಾಲನ ಭತ್ಯೆಯನ್ನು ಮಗುವಿನ ಆರೋಗ್ಯ, ಪೌಷ್ಠಿಕ ಆಹಾರ ಮತ್ತು ಪಾಲನೆಗೆ ಮಾತ್ರ ಉಪಯೋಗಿಸಲಾಗುವುದೆಂದು ದೃಢೀಕರಿಸತಕ್ಕದ್ದು.
7. ಶಿಶು ಪಾಲನ ಭತ್ಯೆಯನ್ನು ಮಂಜೂರು ಮಾಡುವ ಪ್ರಾಧಿಕಾರವು ಆಯಾ ಜಿಲ್ಲೆಯ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳದ್ದಾಗಿರುತ್ತದೆ

(ಬಿ.ಕಮಲಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ.

ಸರ್ಕಾರದ ಆದೇಶ ಸಂಖ್ಯೆ: ಮಮಇ 265 ಪಿಹೆಚ್‌ಪಿ 2013, ದಿನಾಂಕ: 28-8-2013ಕ್ಕೆ ಅನುಬಂಧ-2

ಕರ್ನಾಟಕ ಸರ್ಕಾರ

ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಬೆಂಗಳೂರು.

## ಬಡ ಕುಟುಂಬಗಳಲ್ಲಿನ ಅಂಧ ಮಹಿಳೆಯರಿಗೆ ಜನಿಸುವ ಮಕ್ಕಳ ಆರೈಕೆಗಾಗಿ ಶಿಶುಪಾಲನ ಭತ್ಯೆ ಮಂಜೂರಾತಿಗಾಗಿ ಅರ್ಜಿ

ವರ್ಷ:20 -20

ದಿನಾಂಕದೊಂದಿಗೆ ದೃಢೀಕರಿಸಿದ ಇತ್ತೀಚಿನ ಭಾವಚಿತ್ರ

| | | |
|---|---|---|
| 1 | ಅಂಧ ಮಹಿಳೆಯ ಹೆಸರು | |
| | ಗಂಡನ ಹೆಸರು | |
| 2 | ಜನ್ಮ ದಿನಾಂಕ ಮತ್ತು ವಯಸ್ಸು | |
| | ಉದ್ಯೋಗ | |
| 3 | ವಾರ್ಷಿಕ ವರಮಾನ: ತಹಸೀಲ್ದಾರ್ ರವರಿಂದ ಪಡೆದ ಪ್ರಮಾಣ ಪತ್ರ | |
| 4 | ಮಗು ಜನಿಸಿದ ದಿನಾಂಕ ಮತ್ತು ಸ್ಥಳ (ಜನ್ಮ ದಿನಾಂಕದ ದೃಢೀಕೃತ ಪ್ರಮಾಣ ಪತ್ರ ಲಗತ್ತಿಸುವುದು) | |
| | ಮಕ್ಕಳ ಸಂಖ್ಯೆ | |
| 5 | ಅಂಚೆ ವಿಳಾಸ | ಗ್ರಾಮ/ಬೀದಿ<br>ತಾಲ್ಲೂಕು: ಜಿಲ್ಲೆ:<br>ಪಿನ್ |
| 6 | ಖಾಯಂ ವಿಳಾಸ | ಗ್ರಾಮ/ಬೀದಿ<br>ತಾಲ್ಲೂಕು: ಜಿಲ್ಲೆ:<br>ಪಿನ್ |
| 7 | ಮಗುವಿನ ಆರೈಕೆ ಮಾಡುವ ಸಹಾಯಕರ ಹೆಸರು | |
| 11 | ಅಂಚೆ ವಿಳಾಸ | ಗ್ರಾಮ/ಬೀದಿ<br>ತಾಲ್ಲೂಕು: ಜಿಲ್ಲೆ:<br>ಪಿನ್ |
| 12 | ಖಾಯಂ ವಿಳಾಸ | ಗ್ರಾಮ/ಬೀದಿ<br>ತಾಲ್ಲೂಕು: ಜಿಲ್ಲೆ:<br>ಪಿನ್ |
| 13 | ಅಂಧ ಮಹಿಳೆಗೆ ಸಹಾಯಕರ ಸಂಬಂಧ | |

17

# ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಬುದ್ಧಿಮಾಂದ್ಯ, ಸೆರಬ್ರಲ್ ಪಾಲ್ಸಿ, ಆಟಿಸಂ ಮತ್ತು ಬಹುವಿಧ ಅಂಗವಿಕಲತೆಗೆ ಒಳಗಾದ ಬಡತನ ರೇಖೆಗಿಂತ ಕೆಳಗಿರುವ ಕುಟುಂಬದ ಅಂಗವಿಕಲರಿಗೆ ನಿರಾಮಯ ಎಂಬ ಆರೋಗ್ಯ ವಿಮಾ ಯೋಜನೆಯನ್ನು ಜಾರಿಗೆ ತರುವ ಬಗ್ಗೆ.

ಓದಲಾಗಿದೆ: ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರ ಪತ್ರ ಸಂಖ್ಯೆ:ಇಸಿ/19/ ಯೋಜನೆ/2014-15/748, ದಿನಾಂಕ: 19.5.2014.

ಪ್ರಸ್ತಾವನೆ:

2014-15ನೇ ಸಾಲಿನ ಆಯವ್ಯಯದಲ್ಲಿ ಬುದ್ಧಿಮಾಂದ್ಯ, ಸೆರಬ್ರಲ್ ಪಾಲ್ಸಿ, ಆಟಿಸಂ ಮತ್ತು ಬಹುವಿಧ ಅಂಗವಿಕಲತೆಗೆ ಒಳಗಾದ ಬಡತನ ರೇಖೆಗಿಂತ ಕೆಳಗಿರುವ ಕುಟುಂಬದ ಅಂಗವಿಕಲರಿಗೆ ನಿರಾಮಯ ಎಂಬ ಆರೋಗ್ಯ ವಿಮಾ ಯೋಜನೆಯನ್ನು ಜಾರಿಗೆ ತರಲು ಘೋಷಿಸಲಾಗಿದೆ. ಕೇಂದ್ರ ಸರ್ಕಾರದ ನ್ಯಾಷನಲ್ ಟ್ರಸ್ಟ್, 1999 ಆಕ್ಟ್ ಅಡಿ ಬರುವ ಆಟಿಸಂ, ಸೆರಬ್ರಲ್ ಪಾಲ್ಸಿ, ಬುದ್ಧಿಮಾಂದ್ಯರು ಮತ್ತು ಬಹುವಿಧ ಅಂಗವಿಕಲತೆ ಹೊಂದಿರುವ 04 ವಿಧದ ವಿಕಲಚೇತನರಿಗೆ "ನಿರಾಮಯ" ಆರೋಗ್ಯ ವಿಮಾ ಯೋಜನೆಯನ್ನು ರಾಜ್ಯದ ನೋಡಲ್ ಏಜೆನ್ಸಿಯಾದ ಸೇವಾ-ಇನ್-ಆಕ್ಷನ್ ಸ್ವಯಂ ಸೇವಾ ಸಂಸ್ಥೆಯ ಮುಖಾಂತರ ಅನುಷ್ಠಾನಗೊಳಿಸುತ್ತಿದ್ದು, ಈ ಯೋಜನೆಯಡಿ ವಾರ್ಷಿಕ ಗರಿಷ್ಠ ರೂ.1.00 ಲಕ್ಷಗಳನ್ನು ನ್ಯಾಷನಲ್ ಟ್ರಸ್ಟ್‌ನವರು ಗುರುತಿಸಿರುವ ಆಸ್ಪತ್ರೆಯಲ್ಲಿ ಚಿಕಿತ್ಸೆಗಾಗಿ ಭರಿಸಿರುವ ವೆಚ್ಚವನ್ನು ಮರು ಪಾವತಿಸಲು ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರು ಮೇಲೆ ಓದಲಾದ ದಿನಾಂಕ: 19.5.2014 ರ ಪತ್ರದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಮೇಲಿನ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

## ಸರ್ಕಾರದ ಆದೇಶ ಸಂಖ್ಯೆ: ಮಮಇ 115 ಪಿಎಚ್‌ಪಿ 2014, ಬೆಂಗಳೂರು, ದಿನಾಂಕ: 21.08.2014.

25/08/14

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಬುದ್ಧಿಮಾಂದ್ಯ, ಸೆರಬ್ರಲ್ ಪಾಲ್ಸಿ, ಆಟಿಸಂ ಮತ್ತು ಬಹುವಿಧ ಅಂಗವಿಕಲತೆಗೆ ಒಳಗಾದ ಬಡತನ ರೇಖೆಗಿಂತ ಕೆಳಗಿರುವ ಕುಟುಂಬದ ಅಂಗವಿಕಲರಿಗೆ ನಿರಾಮಯ ಎಂಬ ಆರೋಗ್ಯ ವಿಮಾ ಯೋಜನೆಯನ್ನು ಜಾರಿಗೆ ತರಲು ಆಡಳಿತಾತ್ಮಕ ಅನುಮೋದನೆ ನೀಡಿದೆ.

ಈ ಯೋಜನೆಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2235-02-101-0-99 ಯೋಜನೆ ಉಪ ಲೆಕ್ಕಶೀರ್ಷಿಕೆ 100 ಧನಸಹಾಯ ಮತ್ತು ಪರಿಹಾರ ಯೋಜನೆಯಡಿ ಒದಗಿಸಿರುವ ರೂ.1.12ಕೋಟಿ(ರೂಪಾಯಿ ಒಂದು ಕೋಟಿ ಹನ್ನೆರಡು ಲಕ್ಷಗಳು) ಅನುದಾನದ ಮಿತಿಯಲ್ಲಿ ಭರಿಸತಕ್ಕದ್ದು.

ಆರೋಗ್ಯ ಇಲಾಖೆಯಲ್ಲಿ ಲಭ್ಯವಿರುವ ಫಲಾನುಭವಿಗಳ ಪಟ್ಟಿಯಲ್ಲಿ ಆಯ್ಕೆ ಮಾಡಿರುವ ಫಲಾನುಭವಿಗಳು ಪುನರಾರ್ವತನೆ ಆಗದಂತೆ ಹೊಂದಾಣಿಕೆ ಮಾಡಿಕೊಂಡು ಈ ಯೋಜನೆಯನ್ನು ಅನುಷ್ಠಾನಗೊಳಿಸತಕ್ಕದ್ದು.



1757
25-8-2014

18



ಈ ಆದೇಶದ ಅನುಬಂಧದಲ್ಲಿ ಲಗತ್ತಿಸಿರುವ ಮಾರ್ಗಸೂಚಿಗಳ ಪ್ರಕಾರ ಯೋಜನೆಯನ್ನು ಅನುಷ್ಠಾನಗೊಳಿಸುವುದು.

ಈ ಆದೇಶವನ್ನು ಕ್ರಮವಾಗಿ ಆರ್ಥಿಕ ಇಲಾಖೆ, ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 464 ವೆಚ್ಚ-3/2014, ದಿನಾಂಕ: 13.6.2014 ಹಾಗೂ ಪಿಡಿ 38 ಐಎಂಎಂ 2014, ದಿನಾಂಕ: 23.7.2014 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಗೋಪಾಲ್) 21/8/14
ಸರ್ಕಾರದ ಉಪ ಕಾರ್ಯದರ್ಶಿ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ
ಹಾಗೂ ವಿಕಲಚೇತನರ ಮತ್ತು ಹಿರಿಯ
ನಾಗರಿಕರ ಸಬಲೀಕರಣ ಇಲಾಖೆ.

ಇವರಿಗೆ:-

1. ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು.
2. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು.
3. ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಬೆಂಗಳೂರು.
4. ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನಸೌಧ.
5. ನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ಬೆಂಗಳೂರು.
6. ಆಂತರಿಕ ಆರ್ಥಿಕ ಸಲಹೆಗಾರರು,ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು.
7. ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವೆಚ್ಚ-3 & 9).
8. ನಿರ್ದೇಶಕರು, ಯೋಜನಾ ಇಲಾಖೆ (ಪಿ.ಎಂ.ಐ. ವಿಭಾಗ).
9. ಎಲ್ಲಾ ಜಿಲ್ಲೆಯ ಉಪ ನಿರ್ದೇಶಕರು/ ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ (ನಿರ್ದೇಶಕರ ಮುಖಾಂತರ).
10. ಎಲ್ಲಾ ಜಿಲ್ಲೆಯ ಅಂಗವಿಕಲರ ಕಲ್ಯಾಣಾಧಿಕಾರಿಗಳು, ಉಪ ನಿರ್ದೇಶಕರ ಕಛೇರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ (ನಿರ್ದೇಶಕರ ಮುಖಾಂತರ).
11. ಶಾಖಾ ರಕ್ಷಾ ಕಡತ/ ಹೆಚ್ಚುವರಿ ಪ್ರತಿ.

ಸರ್ಕಾರದ ಆದೇಶ ಸಂಖ್ಯೆ: ಮಮಇ 115 ಪಿಹೆಚ್‌ಪಿ 2014, ದಿನಾಂಕ: 04.08.2014ರ ಆದೇಶಕ್ಕೆ

ಮಾರ್ಗಸೂಚಿಗಳು

1. ವಿಕಲಚೇತನ ವ್ಯಕ್ತಿಗಳು ಭಾರತ ಪ್ರಜೆಯಾಗಿರಬೇಕು. ಹಾಗೂ ಇವರು ಕರ್ನಾಟಕದಲ್ಲಿ ಕನಿಷ್ಠ ಹಿಂದಿನ 10 ವರ್ಷಗಳು ವಾಸವಾಗಿರಬೇಕು.
2. ಕೇಂದ್ರ ಸರ್ಕಾರದ ನ್ಯಾಷನಲ್ ಟ್ರಸ್ಟ್ ಆಕ್ಟ್ ನಡಿ ಬರುವ 04 ವಿವಿಧ ಅಂದರೆ ಬುದ್ಧಿಮಾಂದ್ಯ, ಸೆರಬ್ರಲ್ ಪಾಲ್ಸಿ, ಆಟಿಸಂ ಮತ್ತು ಬಹುವಿಧ ವಿಕಲಚೇತನರು ಮಾತ್ರ ಸೌಲಭ್ಯ ಪಡೆಯಬಹುದಾಗಿದೆ.
3. ಈ ಯೋಜನೆಗೆ ಒಳಪಡುವವರು ಬಡತನ ರೇಖೆಗಿಂತ ಕೆಳಗಿನವರಾಗಿರಬೇಕು ಹಾಗೂ ಬಿ.ಪಿ.ಎಲ್ ಕಾರ್ಡ್ ದೃಢೀಕೃತ ಪ್ರತಿ ಲಗತ್ತಿಸುವುದು. ಬಿ.ಪಿ.ಎಲ್ ಕಾರ್ಡ್ ಇಲ್ಲದ ಫಲಾನುಭವಿಗಳು ಗ್ರಾಮೀಣಪ್ರದೇಶದವರಾಗಿದ್ದಲ್ಲಿ ರೂ.12,000/- ಹಾಗೂ ನಗರ ಪ್ರದೇಶದವರಾಗಿದ್ದಲ್ಲಿ ರೂ.17,000/-ಗಳ ಮಿತಿಯೊಳಗಿರಬೇಕು. ಇತ್ತೀಚಿನ ಆದಾಯ ಪ್ರಮಾಣ ಪತ್ರದ ದೃಢೀಕೃತ ಪ್ರತಿ ಲಗತ್ತಿಸಬೇಕು. ಹಾಗೂ ಫಲಾನುಭವಿಗಳು ಪುನರಾವರ್ತನೆ ಆಗದಂತೆ ಕ್ರಮ ವಹಿಸಬೇಕು.
4. ವಯಸ್ಸಿನ ಮಿತಿ ಇರುವುದಿಲ್ಲ
5. ಯಾವುದೇ ಅರ್ಹ ಫಲಾನುಭವಿಯು ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳಿಗೆ ನೇರವಾಗಿ ಅಥವಾ ನ್ಯಾಷನಲ್ ಟ್ರಸ್ಟ್‌ಯಡಿ ನೋಂದಾಯಿಸಿಕೊಂಡ ಸಂಸ್ಥೆಯ ಮೂಲಕ ಅರ್ಜಿಯನ್ನು ಸಲ್ಲಿಸಬೇಕಾಗಿರುತ್ತದೆ.
6. ಅರ್ಜಿಯನ್ನು ಆಂಗ್ಲ ಭಾಷೆಯಲ್ಲಿ ನಿಗದಿತ ನಮೂನೆಯಲ್ಲಿ ಆನ್‌ಲೈನ್ ಮೂಲಕ ಸಲ್ಲಿಸುವುದು.
7. ಅಂಗವಿಕಲರ ಅಧಿನಿಯಮದಲ್ಲಿ ಸೂಚಿಸಿರುವ ಹಾಗೂ ವೈದ್ಯಕೀಯ ಪ್ರಾಧಿಕಾರದವರು ಶಿಫಾರಸ್ಸು ಮಾಡಿರುವ ವೈದ್ಯಕೀಯ ಪ್ರಮಾಣವನ್ನು ಸಲ್ಲಿಸಬೇಕಾಗಿರುತ್ತದೆ.
8. ಈ ಯೋಜನೆಯಡಿ ಸೌಲಭ್ಯ ಪಡೆಯುವ ವಿಕಲಚೇತನ ವ್ಯಕ್ತಿಗೆ ವಾರ್ಷಿಕ ರೂ.250/-ಗಳ ವಿಮಾ ಮೊತ್ತವನ್ನು ಒಂದು ಬಾರಿಗೆ ಸರ್ಕಾರವೇ ಪಾವತಿ ಮಾಡುವುದು. ಪ್ರತಿ ವರ್ಷ ಫಲಾನುಭವಿಗಳು ಯೋಜನೆಯಡಿ ತಮ್ಮ ನೋಂದಣಿಯನ್ನು ಕಡ್ಡಾಯವಾಗಿ ನವೀಕರಿಸಿಕೊಳ್ಳತಕ್ಕದ್ದು. ನವೀಕರಣಕ್ಕೆ ಯಾವುದೇ ಹಣ ಪಾವತಿಸಬೇಕಾಗಿರುವುದಿಲ್ಲ.
9. ಈ ಯೋಜನೆಯಡಿ ಬಡತನ ರೇಖೆಗಿಂತ ಕೆಳಗಿರುವ ವಿಕಲಚೇತನ ವ್ಯಕ್ತಿಗಳಿಗೆ ಪ್ರತೀ ವರ್ಷ ಗರಿಷ್ಠ ರೂ.1.00 ಲಕ್ಷದವರೆಗೆ ನಿರಂತರ ವೈದ್ಯಕೀಯ ತಪಾಸಣೆಗೆ, ಹಾಸ್ಪಟಲೈಜೇಷನ್, ಥೆರಪಿ ಪಡೆಯಲು, ನಿವಾರಣಾ ಶಸ್ತ್ರ ಚಿಕಿತ್ಸೆಗೆ ಹಾಗೂ ಸಾರಿಗೆ ವೆಚ್ಚಗಳಿಗಾಗಿ ನ್ಯಾಷನಲ್ ಟ್ರಸ್ಟ್ ಅಧಿನಿಯಮದವರು ನಿಗದಿ ಪಡಿಸಿರುವ ಮೊತ್ತದ ಮಿತಿಯೊಳಗೆ ವೈದ್ಯಕೀಯ ಶುಶ್ರೂಷೆ ಪಡೆದ ನಂತರ ಮಾತ್ರ ವೈದ್ಯಕೀಯ ವೆಚ್ಚ ಮರುಪಾವತಿ ಪಡೆಯಲು ಅವಕಾಶವಿದೆ.
10. ಈ ಯೋಜನೆಯನ್ನು ನ್ಯಾಷನಲ್ ಟ್ರಸ್ಟ್ ಆಯ್ಕೆ ಮಾಡಿದ ಹಾಲಿ ಇರುವ ಐ.ಸಿ.ಐ.ಸಿ.ಐ ಲಂಬಾರ್ಡ್ ಮೂಲಕ ಅನುಷ್ಠಾನಗೊಳಿಸಲಾಗುವುದು.
11. ಅರ್ಜಿದಾರರು ನಿರಾಮಯ ಯೋಜನೆಯಡಿ ವೈದ್ಯಕೀಯ ವೆಚ್ಚಗಳ ಮರುಪಾವತಿಗಾಗಿ ಐ.ಸಿ.ಐ.ಸಿ.ಐ ಲಂಬಾರ್ಡ್ ಸಂಸ್ಥೆಗೆ ಸಂಬಂಧಿಸಿದ ರಸೀದಿಗಳು/ ಬಿಲ್ ಮುಂತಾದವುಗಳನ್ನು ಚಿಕಿತ್ಸೆ ಪಡೆದ/ ಆಸ್ಪತ್ರೆಯಿಂದ ಬಿಡುಗಡೆಗೊಂಡ 30 ದಿನಗಳೊಳಗಾಗಿ ವಿವರಗಳೊಂದಿಗೆ ಸಲ್ಲಿಸುವುದು.

2/8/14

(ಗೋಪಾಲ್)

ಸರ್ಕಾರದ ಉಪ ಕಾರ್ಯದರ್ಶಿ

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

ಹಾಗೂ ವಿಕಲಚೇತನರ ಮತ್ತು ಹಿರಿಯ

ನಾಗರಿಕರ ಸಬಲೀಕರಣ ಇಲಾಖೆ.

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ರಾಜ್ಯ ಅನುದಾನದಡಿ ಸ್ವಯಂ ಸೇವಾ ಸಂಸ್ಥೆಗಳ ಮೂಲಕ ನಡೆಸಲಾಗುತ್ತಿರುವ ಹಿರಿಯ ನಾಗರಿಕರ ಸಹಾಯವಾಣಿ ಕೇಂದ್ರಗಳಿಗೆ ನೀಡುತ್ತಿರುವ ವಾರ್ಷಿಕ ಅನುದಾನ ರೂ.3.60ಲಕ್ಷಗಳನ್ನು ರೂ.7.15ಲಕ್ಷಗಳಿಗೆ ಹೆಚ್ಚಿಸುವ ಹಾಗೂ ಬಾಕಿ 15 ಜಿಲ್ಲೆಗಳಿಗೆ ಯೋಜನೆಯನ್ನು ವಿಸ್ತರಿಸಲು ಆಡಳಿತಾತ್ಮಕ ಮಂಜೂರಾತಿ ನೀಡುವ ಕುರಿತು.

ಓದಲಾಗಿದೆ: 1) ಸರ್ಕಾರದ ಆದೇಶ ಸಂಖ್ಯೆ: ಮಮಇ/265/ಎಸ್.ಜೆ.ಡಿ/2004 ದಿನಾಂಕ:29-09-1995

2) ಮಾನ್ಯ ಮುಖ್ಯಮಂತ್ರಿಗಳು ದಿನಾಂಕ:12-07-2013ರಂದು ಮಂಡಿಸಿದ ಆಯವ್ಯಯ ಭಾಷಣದ ಕಂಡಿಕೆ 234ರಲ್ಲಿ ಘೋಷಿಸಿದಂತೆ.

3) ನಿರ್ದೇಶಕರು, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ವಿಹಿನಾಸಇ/ಹಿ.ನಾ.ವಿ/ಸಿ.2/ರಾ.ವ್ಯ.ಅ/ ಹೆಚ್ಚಳ/12/2013-14/1359 ದಿನಾಂಕ;23-07-2013.

ಪ್ರಸ್ತಾವನೆ:

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ, ಸ್ವಯಂ ಸೇವಾ ಸಂಸ್ಥೆಗಳ ಮೂಲಕ ಹಿರಿಯ ನಾಗರಿಕರ ಸಮಸ್ಯೆಗಳನ್ನು ತ್ವರಿತವಾಗಿ ವಿಲೇವಾರಿ ಮಾಡಲು ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳ ಕಛೇರಿಯಲ್ಲಿ ಪೊಲೀಸ್ ಇಲಾಖೆಯ ಸಹಯೋಗದೊಂದಿಗೆ ಟೋಲ್ ಫ್ರೀ ದೂರವಾಣಿ 1090 ಸಂಖ್ಯೆಯ ಹಿರಿಯ ನಾಗರಿಕರ ಸಹಾಯವಾಣಿ ಕೇಂದ್ರಗಳನ್ನು ವಾರ್ಷಿಕ ರೂ.3.60ಲಕ್ಷಗಳ ಆವರ್ತಕ ವೆಚ್ಚಗಳೊಂದಿಗೆ ಅನುಷ್ಠಾನಗೊಳಿಸಲು ಅನುಮತಿಸಲಾಗಿದೆ.

ಮೇಲೆ ಓದಲಾದ (2)ರಂತೆ ಮಾನ್ಯ ಮುಖ್ಯಮಂತ್ರಿಗಳು ದಿನಾಂಕ:12-07-2013ರಂದು ಮಂಡಿಸಿರುವ 2013-14ನೇ ಸಾಲಿನ ಆಯವ್ಯಯದಲ್ಲಿ ಭಾಷಣದ ಕಂಡಿಕೆ 234ರಲ್ಲಿ ಹಿರಿಯ ನಾಗರಿಕರ ಸಹಾಯವಾಣಿಗೆ ಒದಗಿಸುತ್ತಿರುವ ವಾರ್ಷಿಕ ಅನುದಾವನ್ನು ರೂ.3.60ಲಕ್ಷಗಳಿಂದ ರೂ.7.15ಲಕ್ಷಗಳಿಗೆ ಹೆಚ್ಚಿಸಲಾಗಿದೆಯೆಂದು ಹಾಗೂ ಈ ಯೋಜನೆಯನ್ನು ಇನ್ನೂ 15 ಜಿಲ್ಲೆಗಳಿಗೆ ವಿಸ್ತರಿಸಲಾಗುವುದು ಎಂದು ಘೋಷಿಸಿರುತ್ತಾರೆ.

ಅದರಂತೆ, ಮೇಲೆ ಓದಲಾದ (3)ರ ಪತ್ರದಲ್ಲಿ ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರು ಸ್ವಯಂ ಸೇವಾ ಸಂಸ್ಥೆಗಳ ಮೂಲಕ ರಾಜ್ಯವಲಯದಡಿ ಬಾಗಲಕೋಟೆ, ಬೆಂಗಳೂರು ನಗರ, ಬೆಳಗಾವಿ, ಬಳ್ಳಾರಿ, ಬೀದರ್, ಬಿಜಾಪುರ, ದಕ್ಷಿಣ ಕನ್ನಡ, ದಾವಣಗೆರೆ, ಧಾರವಾಡ, ಗುಲ್ಬರ್ಗ, ಕೋಲಾರ, ಮೈಸೂರು, ರಾಯಚೂರು, ಶಿವಮೊಗ್ಗ, ತುಮಕೂರು ಜಿಲ್ಲೆಗಳಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಮೂಲಕ ನಡೆಯುತ್ತಿರುವ ಸಹಾಯವಾಣಿ ಕೇಂದ್ರಗಳಿಗೆ ಆವರ್ತಕ ವೆಚ್ಚಗಳನ್ನು ಭರಿಸಲು ವಾರ್ಷಿಕವಾಗಿ ನೀಡಲಾಗುತ್ತಿರುವ ರೂ.3.60ಲಕ್ಷಗಳನ್ನು ರೂ.6.16ಲಕ್ಷ ವೆಚ್ಚಗಳಿಗೆ ಹೆಚ್ಚಿಸಿ ಹಾಗೂ ಬಾಕಿ ಉಳಿದ ಜಿಲ್ಲೆಗಳಾದ ಬೆಂಗಳೂರು ಗ್ರಾಮಾಂತರ, ಚಾಮರಾಜನಗರ, ಚಿಕ್ಕಬಳ್ಳಾಪುರ, ಚಿಕ್ಕಮಗಳೂರು, ಚಿತ್ರದುರ್ಗ, ಗದಗ, ಹಾಸನ, ಹಾವೇರಿ, ಕೊಡಗು, ಕೊಪ್ಪಳ, ಮಂಡ್ಯ, ರಾಮನಗರ, ಉಡುಪಿ, ಉತ್ತರ ಕನ್ನಡ ಹಾಗೂ ಯಾದಗಿರಿ ಜಿಲ್ಲೆಗಳಲ್ಲಿ ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳ ಕಛೇರಿಯಲ್ಲಿ ಹೊಸದಾಗಿ ವಾರ್ಷಿಕ ರೂ.7.15ಲಕ್ಷಗಳ ವೆಚ್ಚದಲ್ಲಿ ಸಹಾಯವಾಣಿ ಕೇಂದ್ರಗಳನ್ನು ಪ್ರಾರಂಭಿಸಲು ಆಡಳಿತಾತ್ಮಕ ಮಂಜೂರಾತಿ ನೀಡುವಂತೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 270 ಪಿಹೆಚ್‌ಪಿ 2013, ಬೆಂಗಳೂರು**

**ದಿನಾಂಕ: 28-08-2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ವತಿಯಿಂದ ಸ್ವಯಂ ಸೇವಾ ಸಂಸ್ಥೆ ಹಾಗೂ ಪೊಲೀಸ್ ಇಲಾಖೆಯ ಸಹಯೋಗದೊಂದಿಗೆ ರಾಜ್ಯ ವಲಯದಡಿ ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳ ಕಛೇರಿಯಲ್ಲಿ ಟೋಲ್‌ಫ್ರೀ ದೂರವಾಣಿ 1090 ಸಂಖ್ಯೆಯ ಹಿರಿಯ ನಾಗರಿಕರ ಸಹಾಯವಾಣಿ ಕೇಂದ್ರವೊಂದಕ್ಕೆ ಭರಿಸಬಹುದಾದ




ಪುಟ ಸಂಖ್ಯೆ..2ಕ್ಕೆ

ವಿವಿಧ ಬಾಬ್ತುಗಳಾದ ಆವರ್ತಕ ವೆಚ್ಚ ರೂ.6.16ಲಕ್ಷಗಳನ್ನು ಹಾಗೂ ಅನಾವರ್ತಕ ವೆಚ್ಚ ರೂ.0.99ಲಕ್ಷ ಒಟ್ಟು ರೂ.7.15ಲಕ್ಷಗಳ (ಸಂಸ್ಥೆಯಿಂದ ಭರಿಸುವ ಶೇ.10ರಷ್ಟು ಅನುದಾನವನ್ನು ಹೊರತುಪಡಿಸಿ) ಅನುದಾನವನ್ನು ಅನುಬಂಧ-1ರಲ್ಲಿ ವಿವರಿಸಿರುವಂತೆ ನೀಡಲು ಉಲ್ಲೇಖ(1)ರ ಸರ್ಕಾರಿ ಆದೇಶವನ್ನು ಮಾರ್ಪಡಿಸಿ, ಅನುಬಂಧ-2ರಲ್ಲಿ ಲಗತ್ತಿಸಿರುವ ಮಾರ್ಗಸೂಚಿಗಳನ್ನು ಹಾಗೂ ಸರ್ಕಾರ/ಇಲಾಖೆಯು ಕಾಲಕಾಲಕ್ಕೆ ಹೊರಡಿಸುವ ಆದೇಶ/ಸುತ್ತೋಲೆಗಳನ್ನು ಕಟ್ಟುನಿಟ್ಟಾಗಿ ಪಾಲಿಸುವ ಷರತ್ತಿಗೊಳಪಟ್ಟು ಮಂಜೂರಾತಿ ನೀಡಲಾಗಿದೆ. ಹಾಲಿ ಕಾರ್ಯನಿರ್ವಹಿಸುತ್ತಿರುವ ಸಹಾಯವಾಣಿ ಕೇಂದ್ರಗಳಿಗೆ ಆವರ್ತಕ ವೆಚ್ಚಗಳನ್ನು ಭರಿಸಲು ರೂ.6.16ಲಕ್ಷಗಳ ಅನುದಾನಕ್ಕೆ ಸೀಮಿತಗೊಳಿಸಿ ಆದೇಶಿಸಿದೆ.

ಮುಂದುವರಿದು ಬಾಕಿ ಉಳಿದ ಜಿಲ್ಲೆಗಳಾದ ಬೆಂಗಳೂರು ಗ್ರಾಮಾಂತರ, ಚಾಮರಾಜನಗರ, ಚಿಕ್ಕಬಳ್ಳಾಪುರ, ಚಿಕ್ಕಮಗಳೂರು, ಚಿತ್ರದುರ್ಗ, ಗದಗ, ಹಾಸನ, ಹಾವೇರಿ, ಕೊಡಗು, ಕೊಪ್ಪಳ, ಮಂಡ್ಯ, ರಾಮನಗರ, ಉಡುಪಿ, ಉತ್ತರ ಕನ್ನಡ ಹಾಗೂ ಯಾದಗಿರಿ ಜಿಲ್ಲೆಗಳಲ್ಲಿನ ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳ ಕಛೇರಿಯಲ್ಲಿ ಹೊಸದಾಗಿ ವಾರ್ಷಿಕ ರೂ.7.15ಲಕ್ಷಗಳ ವೆಚ್ಚದಲ್ಲಿ ಸಹಾಯವಾಣಿ ಕೇಂದ್ರಗಳನ್ನು ಸ್ವಯಂ ಸೇವಾ ಸಂಸ್ಥೆಗಳ ಮುಖಾಂತರ 2013-14ನೇ ಸಾಲಿನಿಂದ ಪ್ರಾರಂಭಿಸಲು ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು 2013-14ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ: 2235-02-104-2-04 (ಯೋಜನೆ) ಯಡಿಯಲ್ಲಿ ಒದಗಿಸಿರುವ ಅನುದಾನದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ 557 ವೆಚ್ಚ-3 2013, ದಿ: 28.08.2013 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಬಿ.ಕಮಲಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ.

ಇವರಿಗೆ:

1) ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು
2) ನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ಬೆಂಗಳೂರು.
3) ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಗೋಪುರ, ಬೆಂಗಳೂರು.
4) ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ.
5) ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್, ಬೆಂಗಳೂರು ನಗರ ಜಿಲ್ಲೆ.
6) ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ನಗರ ಜಿಲ್ಲೆ.
7) ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ.
8) ಖಜಾನಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ.
9) ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿಗಳು.

ಸರ್ಕಾರದ ಆದೇಶ ಸಂಖ್ಯೆ: ಮಮಇ 270 ಪಿಹೆಚ್‌ಪಿ 2013, ಬೆಂಗಳೂರು ದಿನಾಂಕ:28-08-2013

ಅನುಬಂಧ-1

| ಕ್ರ.ಸಂ | ವಿವರ | ಪ್ರಸ್ತುತ ನೀಡುತ್ತಿರುವ ಅನುದಾನ | | ಹೆಚ್ಚಿಸಬೇಕಾಗಿರುವ ಅನುದಾನ | | ಷರಾ |
|---|---|---|---|---|---|---|
| (ಎ) | **ಆವರ್ತಕ ವೆಚ್ಚಗಳು:** | | | | | |
| 1 | ಪ್ರಾಜೆಕ್ಟ್ ಕೋ-ಆರ್ಡಿನೇಟರ್ (1) | ರೂ.6000*12*1 | 72,000 | ರೂ.12000*12*1 | 1,44,000 | |
| 2 | ಕೌನ್ಸಿಲರ್ / ಸಮಾಜ ಸೇವಕರು(3) | ರೂ.5000*12*3 | 1,80,000 | ರೂ.10000*12*3 | 3,60,000 | |
| 3 | ಕಛೇರಿ ಸೇವಕರು/ಸ್ವಚ್ಛತಗಾರರ (1) | ರೂ.3000*12*1 | 36,000 | ರೂ.6000*12*1 | 72,000 | |
| | ಸಿಬ್ಬಂದಿಗಳಿಗೆ ಗೌರವಧನ-(1) | | **2,88,000** | | **5,76,000** | |
| 4 | **ಕಚೇರಿ ವೆಚ್ಚಗಳು (ಭರಿಸಿದ ನೈಜ ವೆಚ್ಚಕ್ಕೆ ಸೀಮಿತಗೊಳಿಸಲಾಗುವುದು)** | | | | | |
| (ಅ) | ಲೇಖನ ಸಾಮಗ್ರಿ | ರೂ.5000*12 | 60,000 | ರೂ.1000*12 | 12000 | |
| (ಆ) | ಅಂಚೆ ಚೀಟಿ | | | ರೂ.1000*12 | 12000 | |
| (ಇ) | ಪ್ರಯಾಣ ಭತ್ಯೆ | | | ರೂ.2000*12 | 24000 | |
| (ಈ) | ದೂರವಾಣಿ ವೆಚ್ಚ | | | ರೂ.1500*12 | 18000 | |
| (ಉ) | ಹಿರಿಯ ನಾಗರಿಕರ ಯೋಜನೆಗಳ ಪ್ರಚಾರಕ್ಕಾಗಿ | - | - | ರೂ.1500*12 | 18000 | |
| (ಊ) | ತುರ್ತು ಔಷಧ | ರೂ.1000*12 | 12000 | ರೂ.2000*12 | 24000 | |
| | **ಕಛೇರಿ ವೆಚ್ಚ ಹಾಗೂ ಔಷಧಿ ವೆಚ್ಚ-(2)** | | **72000** | | **108000** | |
| | ಒಟ್ಟು ಆವರ್ತಕ ವೆಚ್ಚ (1+2) | | ***3,60,000*** | | ***6,84,000*** | |
| (ಬಿ) | **ಅನಾವರ್ತಕ ವೆಚ್ಚಗಳು:** | | | | | |
| 1 | ಪ್ರಾಜೆಕ್ಟ್ ಪ್ರಾರಂಭ ಮತ್ತು ಪ್ರಚಾರಕ್ಕಾಗಿ | | 10000 | | 20000 | |
| 2 | ಪೀಠೋಪಕರಣ ಹಾಗೂ ಕಛೇರಿ ಸಾಮಗ್ರಿಗಳಿಗಾಗಿ | | 25000 | | 50000 | |
| 3 | ಕಂಪ್ಯೂಟರ್, ಪ್ರಿಂಟರ್ ಹಾಗೂ ಯುಪಿಎಸ್ ಖರೀದಿಗಾಗಿ | | - | | 40000 | |
| | ಒಟ್ಟು ಅನಾವರ್ತಕ ವೆಚ್ಚ-(3) | | 35.000 | | **1,10,000** | |
| | ಒಟ್ಟು ಅನುದಾನ (1)+(2)+(3) | | ***3,95,000*** | | ***7,94,000*** | |
| | ಸಂಸ್ಥೆಯಿಂದ ಭರಿಸಬೇಕಾದ ಶೇ.10ರಷ್ಟು ಅನುದಾನ | | - | | 79,400 | |
| | ನಿವ್ವಳ ಮೊತ್ತ | | ***3,95,000*** | | ***7,15,000*** | ***ರೂ.7,14,600/-ಗಳನ್ನು 7.15ಲಕ್ಷಗಳಿಗೆ ಪೂರ್ಣಾಂಕಗೊಳಿಸಿದೆ*** |

(ಜಿ.ಕಮಲಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ.

ಸರ್ಕಾರದ ಆದೇಶ ಸಂಖ್ಯೆ: ಮಮಇ 270 ಪಿಹೆಚ್‌ಪಿ 2013, ಬೆಂಗಳೂರು ದಿನಾಂಕ:28-08-2013

ಅನುಬಂಧ-2

1. ಸಹಾಯವಾಣಿ ಕೇಂದ್ರವು ಸ್ವಯಂ ಸೇವಾ ಸಂಸ್ಥೆಯ ಮೂಲಕ ಪೊಲೀಸ್ ಇಲಾಖೆಯ ಸಹಯೋಗದೊಂದಿಗೆ, ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳ ಕಛೇರಿಯಲ್ಲಿ ಮೂಲಭೂತ ಸೌಕರ್ಯಗಳೊಂದಿಗೆ ಬಾಡಿಗೆ ರಹಿತವಾಗಿ ಕಾರ್ಯನಿರ್ವಹಿಸುವುದು.
2. ಸಹಾಯವಾಣಿ ಕೇಂದ್ರವನ್ನು ನಡೆಸುವ ಸ್ವಯಂ ಸೇವಾ ಸಂಸ್ಥೆ ಹಾಗೂ ಪೊಲೀಸ್ ಇಲಾಖೆಯ ನಡುವೆ ಜವಾಬ್ದಾರಿಗಳಿಗೆ ಸಂಬಂಧಿಸಿದಂತೆ ಒಡಂಬಡಿಕೆ ಮಾಡಿಕೊಳ್ಳುವುದು.
3. ಪೊಲೀಸ್ ಇಲಾಖೆಯು 1090 ಟೋಲ್‌ಫ್ರೀ ದೂರವಾಣಿ ಸಂಪರ್ಕವನ್ನು ದೂರಸಂಪರ್ಕ ಇಲಾಖೆಯಿಂದ ಪಡೆದು ಸಹಾಯವಾಣಿ ಕೇಂದ್ರಕ್ಕೆ ಒದಗಿಸುವುದು.
4. ಸ್ವಯಂ ಸೇವಾ ಸಂಸ್ಥೆಯು ಅಗತ್ಯ ಬಿದ್ದಲ್ಲಿ ಪೊಲೀಸ್ ಇಲಾಖೆಯ ವಾಹನಗಳನ್ನು ಬಳಸಿಕೊಳ್ಳುವುದು.
5. ಸ್ವಯಂ ಸೇವಾ ಸಂಸ್ಥೆಯು ಅವಶ್ಯಕತೆ ಎಂದು ಕಂಡುಬಂದಲ್ಲಿ ಪ್ರಕರಣಗಳ ಇತ್ಯರ್ಥಕ್ಕಾಗಿ ಪೊಲೀಸ್ ಇಲಾಖೆಯ ಸಹಕಾರವನ್ನು ಪಡೆದುಕೊಳ್ಳುವುದು.
6. ಹಿರಿಯ ನಾಗರಿಕರ ಸಹಾಯವಾಣಿ ಕೇಂದ್ರಗಳು 24 x 7 ಕಾಲ ಕಾರ್ಯನಿರ್ವಹಿಸತಕ್ಕದ್ದು.
7. 1090 ಟೋಲ್‌ಫ್ರೀ ದೂರವಾಣಿ ಸಂಖ್ಯೆಯು ಜಿಲ್ಲೆಯಾದ್ಯಂತ ಕಾರ್ಯನಿರ್ವಹಿಸತಕ್ಕದ್ದು.
8. ವೈದ್ಯಕೀಯ ಚಿಕಿತ್ಸೆಗಾಗಿ ಸ್ಥಳೀಯ ಜಿಲ್ಲಾ ಆಸ್ಪತ್ರೆಯ ಸೇವೆಯನ್ನು ಬಳಸಿಕೊಳ್ಳುವುದು.
9. ಹಿರಿಯ ನಾಗರಿಕರ ಯೋಜನೆಗಳ ಬಗ್ಗೆ ಹಾಗೂ ಪಾಲಕರ ಪೋಷಣೆ, ಸಂರಕ್ಷಣೆ ಹಾಗೂ ಹಿರಿಯ ನಾಗರಿಕರ ರಕ್ಷಣಾ ಕಾಯ್ದೆ-2007 ಕುರಿತಂತೆ ಗ್ರಾಮ/ತಾಲ್ಲೂಕ/ಜಿಲ್ಲೆ ಮಟ್ಟದಲ್ಲಿ ತಿಂಗಳಲ್ಲಿ ಎರಡು ಬಾರಿ ವ್ಯಾಪಕ ಪ್ರಚಾರ ನೀಡುವುದಲ್ಲದೆ, ಉಪವಿಭಾಗಾಧಿಕಾರಿಗಳ ಅಧ್ಯಕ್ಷತೆಯಲ್ಲಿ ರಚಿಸಿರುವ ನ್ಯಾಯಮಂಡಳಿಯಲ್ಲಿ ದಾಖಲದ ಪ್ರಕರಣಗಳು ಕುರಿತು ಮಾಹಿತಿಯನ್ನು ಸಂಸ್ಥೆಯಲ್ಲಿ ದಾಖಲಿಸಿ, ನಿರ್ದೇಶನಾಯಕ್ಕೆ ವರದಿಸುವುದು.
10. ಹಿರಿಯ ನಾಗರಿಕರಿಗೆ ಸಂಸ್ಥೆಯಲ್ಲಿ ತುರ್ತು ಚಿಕಿತ್ಸೆಗಾಗಿ ಅವಶ್ಯಕ ಔಷಧಿಗಳನ್ನು ನೀಡುವುದಲ್ಲದೆ, ಸ್ಥಳೀಯ ಆಸ್ಪತ್ರೆಗಳ ಸೇವೆಗಳನ್ನು ವೈದ್ಯಕೀಯ ಚಿಕಿತ್ಸೆಗಾಗಿ ಬಳಸಿಕೊಳ್ಳುವುದು.
11. ಸಹಾಯವಾಣಿ ಕೇಂದ್ರದಲ್ಲಿ ಗೌರವಧನ ಆಧಾರದ ಮೇಲೆ ತಾತ್ಕಾಲಿಕವಾಗಿ ಕಾರ್ಯನಿರ್ವಹಿಸುವ ಸಿಬ್ಬಂದಿಗಳಿಗೆ ಇರಬೇಕಾದ ವಿದ್ಯಾರ್ಹತೆ ವಿವರಗಳು

| ಕ್ರ.ಸಂ | ಪದನಾಮ | ಸಂಖ್ಯೆ | ವಿದ್ಯಾರ್ಹತೆ |
|---|---|---|---|
| 1 | ಯೋಜನಾ ಸಂಯೋಜಕರು | 1 | ಸ್ನಾತಕೋತರ ಪದವಿ |
| 2 | ಕೌನ್ಸಿಲರ್/ಸಮಾಜ ಸೇವಕರು | 3 | ಎಂ.ಎಸ್.ಡಬ್ಲ್ಯೂ |
| 3 | ಕಛೇರಿ ಸೇವಕರು/ಸ್ವಚ್ಛತಾಗಾರರು | 1 | ಎಸ್.ಎಸ್.ಎಲ್.ಸಿ |
| 4 | ಪೊಲೀಸ್ ಸಿಬ್ಬಂದಿ (1-ಪುರುಷ, 1-ಮಹಿಳೆ) | 1+1 | ಪೊಲೀಸ್ ಇಲಾಖೆಯಿಂದ ನಿಯೋಜನೆ ಮೇರೆಗೆ |

<u>ಸೂಚನೆ:</u> ಹಾಲಿ ನಡೆಯುತ್ತಿರುವ ಸಹಾಯವಾಣಿ ಕೇಂದ್ರಗಳಲ್ಲಿ ಈ ಕೆಳಗೆ ನಿಗದಿಪಡಿಸಿದ ವಿದ್ಯಾರ್ಹತೆಯ ಸಿಬ್ಬಂದಿಗಳು ಕಾರ್ಯನಿರ್ವಹಿಸದೆ ಇದ್ದಲ್ಲಿ, ಕಡ್ಡಾಯವಾಗಿ ನಿಗದಿಪಡಿಸಿದ ವಿದ್ಯಾರ್ಹತೆಯುಳ್ಳ ಸಿಬ್ಬಂದಿಗಳನ್ನೇ ನೇಮಿಸಿಕೊಳ್ಳುವುದು.

12. ಸಹಾಯವಾಣಿ ಕೇಂದ್ರಗಳಲ್ಲಿ ಸಿಬ್ಬಂದಿಗಳನ್ನು ಗೌರವಧನದ ಆಧಾರದ ಮೇಲೆ ಪಾಲಕರ ಪೋಷಣೆ, ಸಂರಕ್ಷಣೆ ಹಾಗೂ ಹಿರಿಯ ನಾಗರಿಕರ ರಕ್ಷಣೆ ಕಾಯ್ದೆ 2007ರನ್ವಯ ರಚಿತವಾದ ಜಿಲ್ಲಾ ಮಟ್ಟದ ಸಮಿತಿಯಲ್ಲಿ ಅಥವಾ ಜಿಲ್ಲಾ ಮಟ್ಟದ ಸಮಿತಿಯು ನೇಮಿಸಿದ ಉಪಸಮಿತಿಯಲ್ಲಿ ನಿಗದಿತ ವಿದ್ಯಾರ್ಹತೆಯಿರುವ ಸೇವಾ ಮನೋಭಾವವಿರುವ ಅಭ್ಯರ್ಥಿಗಳನ್ನು ನಿಯಮಾನುಸಾರ ತಾತ್ಕಾಲಿಕವಾಗಿ ನೇಮಿಸಿಕೊಳ್ಳುವುದು ಹಾಗೂ ಸಿಬ್ಬಂದಿಗಳಿಗೆ ಸಂಸ್ಥೆಯ ವತಿಯಿಂದ ನೇಮಕಾತಿ ಆದೇಶವನ್ನು ಸಹಾಯವಾಣಿ ಕೇಂದ್ರದ ಯೋಜನೆಯನ್ವಯ ಕರ್ತವ್ಯ ನಿರ್ವಹಿಸಬೇಕೆಂಬ ಷರತ್ತಿನೊಂದಿಗೆ ನೀಡುವುದು.
13. ಸಿಬ್ಬಂದಿಗಳ ವೈಯುಕ್ತಿಕ ಕಡತಗಳನ್ನು ನಿರ್ವಹಿಸುವುದು ಹಾಗೂ ಪ್ರತಿ ಮಾಹೆ ಗೌರವ ಧನವನ್ನು ಚೆಕ್ ಮುಖಾಂತರ ಪಾವತಿಸುವುದು. ಸಿಬ್ಬಂದಿಗಳಿಗೆ ಸೇವಾ ಭದ್ರತೆಯನ್ನಾಗಲಿ ಅಥವಾ ನಿವೃತ್ತಿ ವೇತನವನ್ನಾಗಿ ಮಂಜೂರು ಮಾಡಲಾಗುವುದಿಲ್ಲ.
14. ಸಿಬ್ಬಂದಿಗಳ ಕಾರ್ಯವೈಖರಿಯ ಬಗ್ಗೆ ಸಂಸ್ಥೆಯ ಅಧ್ಯಕ್ಷರು/ಕಾರ್ಯದರ್ಶಿಗಳು/ಪ್ರತಿನಿಧಿಗಳು ಪರಿಶೀಲಿಸುವುದು.
15. ಸಿಬ್ಬಂದಿಗಳು ಮಾಸಿಕ ಒಂದು ರಜೆಯನ್ನು ಮಾತ್ರ ಪಡೆಯಬಹುದಾಗಿದ್ದು, ಗೈರು ಹಾಜರಾದಲ್ಲಿ ಗೌರವಧನದಲ್ಲಿ ಕಡಿತಗೊಳಿಸಬೇಕಾಗಿರುತ್ತದೆ.
16. ಸಿಬ್ಬಂದಿಗಳ ಕಾರ್ಯವೈಖರಿಯು ತೃಪ್ತಿಕರವಾಗಿಲ್ಲದಲ್ಲಿ, ಸಾಕಷ್ಟು ಪುರಾವೆಗಳೊಂದಿಗೆ ಜಿಲ್ಲಾ ಮಟ್ಟದ ಸಮಿತಿಯಲ್ಲಿ ವಿಷಯವನ್ನು ಮಂಡಿಸಿ 30 ದಿನಗಳ ಮುಂಗಡ ನೋಟೀಸ್ ಜಾರಿ ಮಾಡುವುದರ ಮೂಲಕ ಸಿಬ್ಬಂದಿಗಳನ್ನು ಕರ್ತವ್ಯದಿಂದ ಬಿಡುಗಡೆಗೊಳಿಸಬಹುದಾಗಿರುತ್ತದೆ. ಈ ರೀತಿಯಾಗಿ ತೆರವಾದ ಹುದ್ದೆಗಳನ್ನು ಜಿಲ್ಲಾ ಮಟ್ಟದ ಸಮಿತಿಯಲ್ಲಿ ಆಯ್ಕೆ ಮಾಡುವುದು.
17. ಇತರೆ ಸಂಘ ಸಂಸ್ಥೆಗಳೊಂದಿಗೆ ಸಂಪರ್ಕವನ್ನು ಸಾಧಿಸುವುದು.
18. ಕೇಂದ್ರಕ್ಕೆ ಸಂಬಂಧಿಸಿದಂತೆ ಎಲ್ಲಾ ಅಗತ್ಯ ದಾಖಲೆಗಳನ್ನು/ಕಡತಗಳನ್ನು ಇಲಾಖೆಯಿಂದ ಕಾಲಕಾಲಕ್ಕೆ ನೀಡುವ ನಿರ್ದೇಶನದನ್ವಯ ಸಂಸ್ಥೆಯು ನಿರ್ವಹಿಸುವುದು ಹಾಗೂ ಇಲಾಖೆಯ ತಪಾಸಣಾಧಿಕಾರಿಗಳು ಭೇಟಿನೀಡಿದಾಗ ಪರಿಶೀಲನೆಗೆ ಒದಗಿಸುವುದು.
19. ಕೆಳಕಂಡ ಸದಸ್ಯರನ್ನೊಳಗೊಂಡ ಸಮಿತಿಯನ್ನು ರಚಿಸಿ ಸಹಾಯವಾಣಿ ಕೇಂದ್ರದ ಪ್ರಗತಿಯನ್ನು ಪ್ರತಿ 3 ತಿಂಗಳಿಗೊಮ್ಮೆ ಪರಿಶೀಲಿಸುವುದು.

| ಕ್ರ.ಸಂ | ಸದಸ್ಯರು | ಪದನಾಮ |
|---|---|---|
| 1 | ಪೋಲೀಸ್ ವರಿಷ್ಠಾಧಿಕಾರಿಗಳು | ಅಧ್ಯಕ್ಷರು |
| 2 | ಉಪನಿರ್ದೇಶಕರು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | ಸದಸ್ಯರು |
| 3 | ಜಿಲ್ಲಾ ಆಸ್ಪತ್ರೆಯ ಡಿಸ್ಟ್ರಿಕ್ಟ್ ಸರ್ಜನ್/ಡಿ.ಹೆಚ್.ಒ | ಸದಸ್ಯರು |
| 4 | ಉಪವಿಭಾಗಾಧಿಕಾರಿಗಳು, ಕಂದಾಯ ಇಲಾಖೆ, | ಸದಸ್ಯರು |
| 5 | ಸಹಾಯವಾಣಿ ಕೇಂದ್ರ ನಡೆಸುವ ಸ್ವಯಂ ಸೇವಾ ಸಂಸ್ಥೆಯ ಅಧ್ಯಕ್ಷರು/ ಕಾರ್ಯದರ್ಶಿಗಳು | ಸದಸ್ಯರು |
| 6 | ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು | ಸದಸ್ಯ ಕಾರ್ಯದರ್ಶಿಗಳು |

20. ಸಂಸ್ಥೆಯು ವೃದಾಶ್ರಮಕ್ಕೆ ಸಂಬಂಧಿಸಿದಂತೆ ಪ್ರತ್ಯೇಕ ಅಗತ್ಯ ಲೆಕ್ಕಪತ್ರಗಳನ್ನು, ದಾಖಲೆಗಳನ್ನು ಹಾಗೂ ಕಡತಗಳನ್ನು ನಿರ್ವಹಿಸಿ, ವೃದ್ಧಾಶ್ರಮ ನಡೆಯುವ ಕಛೇರಿಯಲ್ಲಿಯೇ ಇಡತಕ್ಕದ್ದು. ಸದರಿ ದಾಖಲೆಗಳನ್ನು ಇಲಾಖೆಯ/ಜಿಲ್ಲಾಪಂಚಾಯತ್‌ನ ತನಿಖಾಧಿಕಾರಿಗಳು ಕೇಳಿದಾಗ ಒದಗಿಸಬೇಕು.

21. ಇಲಾಖೆಯು ನಿಗದಿಪಡಿಸಿದ ನಮೂನೆಗಳಲ್ಲಿ ನಿಯಮಿತವಾಗಿ ಪ್ರಗತಿ ವರದಿಗಳನ್ನು ನಿರ್ದೇಶನಾಲಯಕ್ಕೆ ಸಲ್ಲಿಸುವುದು.
22. ಸಂಸ್ಥೆಯು ಕಾರಣಾಂತರಗಳಿಂದ ಸಹಾಯವಾಣಿ ಕೇಂದ್ರವನ್ನು ನಿರ್ವಹಿಸಲು ಅಸಾಧ್ಯವಾದಲ್ಲಿ ಪಾಲಕರ ಪೋಷಣೆ, ಸಂರಕ್ಷಣೆ ಹಾಗೂ ಹಿರಿಯ ನಾಗರಿಕರ ರಕ್ಷಣೆ ಕಾಯ್ದೆ 2007ರನ್ವಯ ರಚಿತವಾದ ಜಿಲ್ಲಾ ಮಟ್ಟದ ಸಮಿತಿಯಲ್ಲಿ ಮಂಡಿಸಿ ಅದರ ಶಿಫಾರಸ್ಸಿನನ್ವಯ ರದ್ದತಿಗೆ ನಿರ್ದೇಶನಾಲಯಕ್ಕೆ ಶಿಫಾರಸ್ಸು ಮಾಡುವುದು. ರದ್ದು ಮಾಡಲು ಸರ್ಕಾರದ ಆದೇಶ ಬಂದ ನಂತರ ಬೇರೆ ಸಂಸ್ಥೆಗೆ ಸಹಾಯವಾಣಿ ಕೇಂದ್ರವನ್ನು ನಡೆಸಲು ಆಡಳಿತಾತ್ಮಕ ಅನುಮತಿಗಾಗಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸುವುದು.

23 ಸಂಸ್ಥೆಯು ಪ್ರತಿ ವರ್ಷ ಅನುದಾನಕ್ಕೆ ಪ್ರಸ್ತಾವನೆ ಸಲ್ಲಿಸುವಾಗ, ಸಂಸ್ಥೆಯ ಆಡಳಿತ, ಆರ್ಥಿಕ ಸುಸ್ಥಿತಯ ಬಗ್ಗೆ, ಅನುದಾನವನ್ನು ಸಹಾಯವಾಣಿ ಕೇಂದ್ರದ ನಿರ್ವಹಣೆಗೆ ಮಾತ್ರ ಉಪಯೋಗಿಸುತ್ತೇವೆಂದು, ಕಾರ್ಯಕ್ರಮಗಳನ್ನು ಯೋಜನೆಯನ್ವಯ ಯಶಸ್ವಿಯಾಗಿ ನಡೆಸುತ್ತೇವೆಂದು, ಕಾಲಕಾಲಕ್ಕೆ ಪ್ರಗತಿ ವರದಿಗಳನ್ನು ಸಲ್ಲಿಸುತ್ತೇವೆಂದು ಮತ್ತು ಅನುದಾನವು ದುರುಪಯೋಗವಾದಲ್ಲಿ ಅಥವಾ ರಾಜ್ಯ ಸರ್ಕಾರವು ಹೊರಡಿಸಿದ ಆದೇಶ/ಸೂಚನೆಗಳನ್ನು ಪಾಲಿಸದೆ ಇದ್ದಲ್ಲಿ ಸಹಾಯವಾಣಿ ಕೇಂದ್ರವನ್ನು ರದ್ದುಪಡಿಸಲು ಒಪ್ಪಿಕೊಳ್ಳುವುದಾಗಿ ಮತ್ತು ಸರ್ಕಾರದ ಹಣದ ದುರುಪಯೋಗದ ಆಪಾದನೆ ಮೇಲೆ ಶಿಕ್ಷೆಗೆ ಒಳಗಾಗಲು ಸಿದ್ದರಿರುವುದಾಗಿ ಪ್ರಮಾಣೀಕರಿಸಬೇಕು.

**ಹೊಸಜಿಲ್ಲೆಗಳಲ್ಲಿ ಸಹಾಯವಾಣಿ ಕೇಂದ್ರಗಳ ಪ್ರಾರಂಭ :**

1. ಬೆಂಗಳೂರು ಗ್ರಾಮಾಂತರ, ಚಾಮರಾಜನಗರ, ಚಿಕ್ಕಬಳ್ಳಾಪುರ, ಚಿಕ್ಕಮಗಳೂರು, ಚಿತ್ರದುರ್ಗ, ಗದಗ, ಹಾಸನ, ಹಾವೇರಿ, ಕೊಡಗು, ಕೊಪ್ಪಳ, ಮಂಡ್ಯ, ರಾಮನಗರ, ಉಡುಪಿ, ಉತ್ತರ ಕನ್ನಡ ಹಾಗೂ ಯಾದಗಿರಿ ಜಿಲ್ಲೆಗಳಲ್ಲಿನ ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳ ಕಛೇರಿಯಲ್ಲಿ ಸಹಾಯವಾಣಿ ಕೇಂದ್ರಗಳನ್ನು ಪ್ರಾರಂಭಿಸಲು ಇಚ್ಛಿಸುವ ಸಂಸ್ಥೆಗಳು ಆಯಾ ಜಿಲ್ಲೆಯಲ್ಲಿನ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು ಕರ್ನಾಟಕ ಪಾರದರ್ಶಕತೆ ಅಧಿನಿಯಮದಂತೆ ಅರ್ಜಿ ಸಲ್ಲಿಸುವಂತೆ ಪ್ರಕಟಣೆ ಹೊರಡಿಸಿದ ನಂತರ ನಿಗದಿತ ನಮೂನೆಯಲ್ಲಿ ಅರ್ಜಿ ಸಲ್ಲಿಸುವುದು.
2. ಸ್ವೀಕೃತವಾದ ಪ್ರಸ್ತಾವನೆಗಳನ್ನು ಪಾಲಕರ ಪೋಷಣೆ, ಸಂರಕ್ಷಣೆ ಹಾಗೂ ಹಿರಿಯ ನಾಗರಿಕರ ರಕ್ಷಣೆ ಕಾಯ್ದೆ 2007ರನ್ವಯ ರಚಿತವಾದ ಜಿಲ್ಲಾ ಮಟ್ಟದ ಸಮಿತಿಯಲ್ಲಿ ಮಂಡಿಸಿ, ಅದರ ಶಿಫಾರಸ್ಸಿನನ್ವಯ ಆಡಳಿತಾತ್ಮಕ ಮಂಜೂರಾತಿಗಾಗಿ ನಿರ್ದೇಶನಾಲಯದ ಮೂಲಕ ಸರ್ಕಾರಕ್ಕೆ ಸಲ್ಲಿಸುವುದು. ಸರ್ಕರದಿಂದ ಆಡಳಿತಾತ್ಮಕ ಮಂಜೂರಾತಿ ದೊರೆತ ನಂತರವೇ ಸಹಾಯವಾಣಿ ಕೇಂದ್ರಗಳನ್ನು ಪ್ರಾರಂಭಿಸುವುದು.
3. ಅನುದಾನವನ್ನು ಸಹಾಯವಾಣಿ ಕೇಂದ್ರಗಳನ್ನು ಪ್ರಾರಂಭಿಸಲು ಅನುಮತಿ ನೀಡಿದ ದಿನಾಂಕ/ಸಿಬ್ಬಂದಿಗಳ ನೇಮಕಾತಿ, ತನಿಖಾಧಿಕಾರಿಗಳ ಶಿಫಾರಸ್ಸು ಮತ್ತು ವಾಸ್ತವವಾಗಿ ಸಹಾಯವಾಣಿ ಕೇಂದ್ರಗಳನ್ನು ಪ್ರಾರಂಭಿಸಿದ ದಿನಾಂಕ ಮುಂತಾದವುಗಳ ಆಧಾರದ ಮೇಲೆ ಲೆಕ್ಕಾಚಾರ ಮಾಡಲಾಗುವುದು.

**ಹೊಸ ವೃದ್ಧಾಶ್ರಮಗಳನ್ನು ಪ್ರಾರಂಭಿಸಲು ಸಂಸ್ಥೆಗೆ ಇರಬೇಕಾದ ಅರ್ಹತೆಗಳು:**

1. ಸ್ವಯಂ ಸೇವಾ ಸಂಸ್ಥೆಯು ಅಸ್ತಿತ್ವಕ್ಕೆ ಬಂದು ಕನಿಷ್ಠ 2 ವರ್ಷಗಳಾಗಿರಬೇಕು
2. ಸ್ವಯಂ ಸೇವಾ ಸಂಸ್ಥೆಯು ಸಾಕಷ್ಟು ಸಿಬ್ಬಂದಿ ವರ್ಗದೊಂದಿಗೆ ಅಗತ್ಯವಾದ ಮೂಲಭೂತ ಸೌಲಭ್ಯ, ಸಂಪನ್ಮೂಲ ಹಾಗೂ ಅನುಭವ ಮತ್ತು ಆರ್ಥಿಕವಾಗಿ ಸುಸ್ಥಿತಿಯುಳ್ಳ ಆಡಳಿತ ವರ್ಗದವರನ್ನು ಹೊಂದಿರಬೇಕು.
3. ಸ್ವಯಂ ಸೇವಾ ಸಂಸ್ಥೆಯು ಸಹಾಯವಾಣಿ ಕೇಂದ್ರ ಅಥವಾ ಹಿರಿಯನಾಗರಿಕರ ಕ್ಷೇಮಾಭಿವೃದ್ಧಿಗಾಗಿ

ಇಂತಹದ್ದೇ ಇನ್ನಿತರ ಕಾರ್ಯಕ್ರಮಗಳನ್ನು ನಡೆಸುವಲ್ಲಿ ಅನುಭವ ಹೊಂದಿರಬೇಕು ಅಥವಾ ಸಹಾಯವಾಣಿ ಕೇಂದ್ರವನ್ನು ನಡೆಸಲು ದಕ್ಷತೆಯನ್ನು ಹೊಂದಿರುವ ಬಗ್ಗೆ ದಾಖಲೆಗಳನ್ನು ಹಾಜರುಪಡಿಸಬೇಕು.

4. ಸಂಸ್ಥೆಯು ಯಾವುದೇ ಓರ್ವ ವ್ಯಕ್ತಿ ಅಥವಾ ಒಂದು ಜನಾಂಗದ ಲಾಭಕ್ಕಾಗಿ ನಡೆಸುತ್ತಿರಬಾರದು
5. ಸಂಸ್ಥೆಯು ಅಧಿಕೃತವಾಗಿ ರಚಿತವಾಗಿರುವ ಆಡಳಿತ ಮಂಡಳಿಯನ್ನು ಹೊಂದಿದ್ದು, ಆಡಳಿತ ವರ್ಗದ ಅಧಿಕಾರ, ಕರ್ತವ್ಯಗಳು ಮತ್ತು ಜವಾಬ್ದಾರಿಗಳನ್ನು ಸ್ಪಷ್ಟ ಹಾಗೂ ಖಚಿತವಾಗಿ ಸಂಸ್ಥೆಯ ಬರವಣಿಗೆಯಲ್ಲಿನ ನಿಬಂಧನೆಗಳಲ್ಲಿ ನಿರೂಪಿತವಾಗಿರಬೇಕು.
6. ಸಂಸ್ಥೆಯ ಸೇವೆಗಳು ಯಾವುದೇ ಜಾತಿ, ಪಂಥ, ಮತ ಮತ್ತು ಭಾಷೆಗಳನ್ನು ಪರಿಗಣಿಸದೇ ಎಲ್ಲರಿಗೂ ವರ್ಷದ ಎಲ್ಲಾ ಕಾಲದಲ್ಲಿಯೂ ಲಭ್ಯವಿರಬೇಕು
7. ಈ ಯೋಜನೆಯ ಉದ್ದೇಶಕ್ಕಾಗಿ ಸ್ವಯಂ ಸೇವಾ ಸಂಸ್ಥೆಗಳು ಯಾವುದೆಂದರೆ :
   (ಅ) ಇಂಡಿಯನ್ ಸೊಸೈಟೀಸ್ ರಿಜಿಸ್ಟ್ರೇಷನ್ ಆಕ್ಟ್ 1860ರ ಪ್ರಕಾರ ನೋಂದಣಿಯಾಗಿರುವ ಸಂಸ್ಥೆ.
   (ಆ) ಯಾವುದೇ ಲಾಭ ಉದ್ದೇಶವಿಲ್ಲದೇ ನೋಂದಣಿಯಾಗಿರುವ ಚಾರಿಟಬಲ್ ಕಂಪನಿ
   (ಇ) ಭಾರತದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಪ್ರಕಾರ ನೋಂದಣಿಯಾಗಿರುವ ಸಾರ್ವಜನಿಕ ಟ್ರಸ್ಟ್
   (ಈ) ನೋಂದಣಿಯಾಗಿ ಸಮಾಜ ಸೇವೆಯಲ್ಲಿ ತೊಡಗಿರುವ ಅಧಿಕಾರೇತರ ಸಂಸ್ಥೆಗಳು
   (ಉ) 1960ರ ಕರ್ನಾಟಕ ಸಂಘ ಸಂಸ್ಥೆಗಳ ಅಧಿನಿಯಮದ ಪ್ರಕಾರ ನೋಂದಣಿಯಾಗಿರುವ ಸಂಸ್ಥೆಗಳು.
8. ಇದೇ ಉದ್ದೇಶಕ್ಕಾಗಿ ಕೇಂದ್ರ ಸರ್ಕಾರದಿಂದಾಗಲೀ ಅಥವಾ ರಾಜ್ಯ ಸರ್ಕಾರದ ಇತರೆ ಇಲಾಖೆಗಳಿಂದಾಗಲೀ ಅನುದಾನ ಸ್ವೀಕರಿಸುತ್ತಿದ್ದಲ್ಲಿ ಈ ಯೋಜನೆಯಡಿ ಅನುದಾನ ಪಡೆಯಲು ಅರ್ಹವಾಗುವುದಿಲ್ಲ.
9. ಸಂಸ್ಥೆಯು ಪ್ರತಿ ವರ್ಷ ಅನುದಾನಕ್ಕೆ ಪ್ರಸ್ತಾವನೆ ಸಲ್ಲಿಸುವಾಗ, ಸಂಸ್ಥೆಯ ಆಡಳಿತ, ಆರ್ಥಿಕ ಸುಸ್ಥಿತಯ ಬಗ್ಗೆ, ಅನುದಾನವನ್ನು ಸಹಾಯವಾಣಿ ಕೇಂದ್ರದ ನಿರ್ವಹಣೆಗೆ ಮಾತ್ರ ಉಪಯೋಗಿಸುತ್ತೇವೆಂದು, ಕಾರ್ಯಕ್ರಮಗಳನ್ನು ಯೋಜನೆಯನ್ವಯ ಯಶಸ್ವಿಯಾಗಿ ನಡೆಸುತ್ತೇವೆಂದು, ಕಾಲಕಾಲಕ್ಕೆ ಪ್ರಗತಿ ವರದಿಗಳನ್ನು ಸಲ್ಲಿಸುತ್ತೇವೆಂದು ಮತ್ತು ಅನುದಾನವು ದುರುಪಯೋಗವಾದಲ್ಲಿ ಅಥವಾ ರಾಜ್ಯ ಸರ್ಕಾರವು ಹೊರಡಿಸಿದ ಆದೇಶ/ಸೂಚನೆಗಳನ್ನು ಪಾಲಿಸದೆ ಇದ್ದಲ್ಲಿ ಸಹಾಯವಾಣಿ ಕೇಂದ್ರವನ್ನು ರದ್ದುಪಡಿಸಲು ಒಪ್ಪಿಕೊಳ್ಳುವುದಾಗಿ ಮತ್ತು ಸರ್ಕಾರದ ಹಣದ ದುರುಪಯೋಗದ ಆಪಾದನೆ ಮೇಲೆ ಶಿಕ್ಷೆಗೆ ಒಳಗಾಗಲು ಸಿದ್ಧರಿರುವುದಾಗಿ ಪ್ರಮಾಣೀಕರಿಸಬೇಕು.

(ಬಿ.ಕಮಲಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ.

ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಹಿರಿಯ ನಾಗರಿಕರ ಹಗಲು ಯೋಗಕ್ಷೇಮ ಕೇಂದ್ರಕ್ಕೆ ಒದಗಿಸುತ್ತಿರುವ ವಾರ್ಷಿಕ ಅನುದಾನವನ್ನು ರೂ. 4.15 ಲಕ್ಷಗಳಿಂದ ರೂ.11.2ಗಳಿಗೆ ಹೆಚ್ಚಿಸಲು ಮತ್ತು ಈ ಯೋಜನೆಯನ್ನು ಇನ್ನೂ 10 ಜಿಲ್ಲೆಗಳಿಗೆ ವಿಸ್ತರಿಸುವ ಬಗ್ಗೆ.

ಓದಲಾಗಿದೆ: 1) ಸರ್ಕಾರದ ಆದೇಶ ಸಂಖ್ಯೆ: ಮಮಇ 246 ಎಸ್‌ಜೆಡಿ 2004, ದಿನಾಂಕ: 26-10-2004.
2) ನಿರ್ದೇಶಕರು, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಬೆಂಗಳೂರು ಇವರ ಪತ್ರ ಸಂಖ್ಯೆ:ವಿಹಿನಾಸಇ/ಇ-3/03/2014-15/116, ದಿನಾಂಕ: 08-4-2014.

ಪ್ರಸ್ತಾವನೆ:

ಹಿರಿಯ ನಾಗರಿಕರಿಗೆ ಆರೋಗ್ಯ ರಕ್ಷಣೆ ಹಾಗೂ ಇತರೆ ಅವಶ್ಯಕತೆಗಳನ್ನು ಒದಗಿಸುವುದಕ್ಕಾಗಿ ರಾಜ್ಯದ ಬೆಂಗಳೂರು, ಬೆಳಗಾವಿ, ಹುಬ್ಬಳ್ಳಿ-ಧಾರವಾಡ ಮತ್ತು ಗುಲ್ಬರ್ಗಾ ಜಿಲ್ಲೆಗಳಲ್ಲಿ ಒಟ್ಟು 4 ಹಗಲು ಯೋಗಕ್ಷೇಮ ಕೇಂದ್ರಗಳನ್ನು ಪ್ರಾರಂಭಿಸಲು ಮೇಲೆ ಕ್ರಸಂ.(1)ರಲ್ಲಿ ಓದಲಾದ ದಿನಾಂಕ: 26.10.2004ರ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ.

2014-15ನೇ ಸಾಲಿನ ಆಯವ್ಯಯದಲ್ಲಿ ಹಿರಿಯ ನಾಗಿರಿಕರ ಹಗಲು ಯೋಗಕ್ಷೇಮ ಕೇಂದ್ರಗಳಿಗೆ ಒದಗಿಸತ್ತಿರುವ ವಾರ್ಷಿಕ ಅನುದಾನವನ್ನು ರೂ.4.15 ಲಕ್ಷಗಳಿಂದ ರೂ.11.2 ಲಕ್ಷಗಳಿಗೆ ಹೆಚ್ಚಿಸಲು ಮತ್ತು ಈ ಯೋಜನೆಯನ್ನು ಇನ್ನೂ 10 ಜಿಲ್ಲೆಗಳಿಗೆ ವಿಸ್ತಿರಿಸಲು ಘೋಷಿಸಲಾಗಿದೆ.

ಈ ಯೋಜನೆಯನ್ನು ಹಿರಿಯ ನಾಗರಿಕರ ಹಗಲು ಯೋಗಕ್ಷೇಮ ಕೇಂದ್ರಗಳು ಇಲ್ಲದೆ ಇರುವ ಮೈಸೂರು, ಹಾಸನ, ಚಿಕ್ಕಬಳ್ಳಾಪುರ, ಬೀದರ್, ಬಳ್ಳಾರಿ, ಮಂಗಳೂರು, ಧಾರವಾಡ, ತುಮಕೂರು, ಚಿತ್ರದುರ್ಗ ಮತ್ತು ಬಾಗಲುಕೋಟೆ ಜಿಲ್ಲೆಗಳಲ್ಲಿ ಹಿರಿಯ ನಾಗರಿಕರ ಕ್ಷೇತ್ರದಲ್ಲಿ ಸೇವೆ ಸಲ್ಲಿಸುತ್ತಿರುವ ಸ್ವಯಂ ಸೇವಾ ಸಂಸ್ಥೆಗಳ ಮೂಲಕ ವಾರ್ಷಿಕ ರೂ. 11.2ಲಕ್ಷಗಳ ಅನುದಾನದಲ್ಲಿ ಪ್ರಾರಂಭಿಸಲು ಮಂಜೂರಾತಿ ನೀಡುವಂತೆ ಮತ್ತು ಪ್ರಸ್ತುತ ಸಾಲಿನ ಅನುದಾನದಲ್ಲಿ ಒದಗಿಸಿರುವ ರೂ.360.73ಲಕ್ಷಗಳ ಜೊತೆಗೆ ರೂ.112.00ಲಕ್ಷಗಳನ್ನು ಹೆಚ್ಚುವರಿಯಾಗಿ ಒದಗಿಸುವಂತೆ ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರು ಮೇಲೆ ಕ್ರಸಂ (2)ರಲ್ಲಿ ಓದಲಾದ ದಿನಾಂಕ: 08-04-2014 ರ ಪತ್ರದಲ್ಲಿ ಕೋರಿರುತ್ತಾರೆ.

ಮೇಲಿನ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 105 ಪಿಹೆಚ್‌ಪಿ 2014, ಬೆಂಗಳೂರು**

**ದಿನಾಂಕ: 13-6-2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, 2014-15ನೇ ಸಾಲಿನ ಆಯವ್ಯಯದಲ್ಲಿ ಹಿರಿಯ ನಾಗರಿಕರ ಹಗಲು ಯೋಗಕ್ಷೇಮ ಕೇಂದ್ರಗಳಿಗೆ ಪ್ರಸ್ತುತ ನೀಡಲಾಗುತ್ತಿರುವ ರೂ.4.15 ಲಕ್ಷಗಳ ಅನುದಾನವನ್ನು ರೂ.11.2ಲಕ್ಷ (ಹನ್ನೊಂದು ಲಕ್ಷದ ಇಪ್ಪತ್ತು ಸಾವಿರ ಮಾತ್ರ)ಗಳಿಗೆ ಹೆಚ್ಚಿಸಲು ಮತ್ತು ಈ ಯೋಜನೆಯನ್ನು 2014-15ನೇ ಸಾಲಿನಲ್ಲಿ ಸೀಮಿತಗೊಳಿಸಿ, ಹೊಸ ಕೇಂದ್ರಗಳನ್ನು ಹಂತ ಹಂತವಾಗಿ ಪ್ರಾರಂಭಿಸಲು ಆಡಳಿತಾತ್ಮಕ ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2235-02-104-2-04 (ಯೋಜನೆ) ರಡಿಯಲ್ಲಿ ಒದಗಿಸಿರುವ ಅನುದಾನದಿಂದಲೇ ಭರಿಸತಕ್ಕದ್ದು.

..2



-:-

ಈ ಆದೇಶವನ್ನು ಕ್ರಮವಾಗಿ ಆರ್ಥಿಕ ಇಲಾಖೆ, ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 350 ವೆಚ್ಚ-3 2014, ದಿನಾಂಕ: 2-6-2014 ಮತ್ತು ಪಿಡಿ 12 ಐಎಂಎಂ 2014, ದಿನಾಂಕ: 2-6-2014 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ.

(ಎಂ.ಕೆ.ಐರಣಿ)

ಸರ್ಕಾರದ ಅಧೀನ ಕಾರ್ಯದರ್ಶಿ-2,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಹಾಗೂ
ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ

ಇವರಿಗೆ:

1) ಮಹಾಲೇಖಪಾಲರು (ಲೆಕ್ಕ ಪರಿಶೋಧನೆ ಮತ್ತು ಲೆಕ್ಕಪತ್ರ), ಕರ್ನಾಟಕ, ಬೆಂಗಳೂರು.
2) ನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ಬೆಂಗಳೂರು.
3) ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಬೆಂಗಳೂರು.
4) ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನಸೌಧ, ಬೆಂಗಳೂರು.
5) ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವೆಚ್ಚ-3), ವಿಧಾನಸೌಧ, ಬೆಂಗಳೂರು.
6) ನಿರ್ದೇಶಕರು, ಪಿಎಂಐ ವಿಭಾಗ, ಯೋಜನ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು.
7) ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿಗಳು.

ಪ್ರತಿ:

1) ಸರ್ಕಾರದ ಪ್ರಧಾನ ಕಾರ್ಯದರ್ಶಿರವರು,ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರ ಆಪ್ತ ಕಾರ್ಯದರ್ಶಿಗಳು, ಬಹುಮಹಡಿಗಳ ಕಟ್ಟಡ, ಬೆಂಗಳೂರು.
2) ಸಕಾರದ ಉಪಕಾರ್ಯದರ್ಶಿರವರು, ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರ ಆಪ್ತ ಸಹಾಯಕರು, ಬಹುಮಹಡಿಗಳ ಕಟ್ಟಡ, ಬೆಂಗಳೂರು.

## ಹಗಲು ಯೋಕ್ಷೇಮ ಕೇಂದ್ರದ ಮಾರ್ಗ ಸೂಚಿ

### ಅನುಬಂಧ-2

1. 150 ಹಿರಿಯ ನಾಗರಿಕರ ಹಗಲು ಯೋಗಕ್ಷೇಮ ಕೇಂದ್ರ ನಿರ್ವಹಣೆಗೆ ಅನುಬಂಧ-1ರಲ್ಲಿ ವಿವರಿಸಿರುವಂತೆ ಸಂಸ್ಥೆಯ ವತಿಯಿಂದ ಭರಿಸಬೇಕಾದ ಶೇ.10ರಷ್ಟು ವೆಚ್ಚವನ್ನು ಹೊರತುಪಡಿಸಿ ಆವರ್ತಕ ಹಾಗೂ ಅನಾವರ್ತಕ ವೆಚ್ಚಗಳನ್ನು ಭರಿಸಲು ರೂ.11.20 ಲಕ್ಷಗಳ ಅನುದಾನ ನೀಡಲಾಗುವುದು.
2. ಅನುದಾನವನ್ನು ಪೂರ್ವಾನ್ವಯವಾಗಿ ಮಂಜೂರು ಮಾಡುವಂತಿಲ್ಲ.
3. ಸಂಸ್ಥೆಯು ಹಗಲು ಯೋಗಕ್ಷೇಮ ಕೇಂದ್ರಕ್ಕೆ ಸಂಬಂಧಿಸಿದಂತೆ ಪ್ರತ್ಯೇಕ ಅಗತ್ಯ ಲೆಕ್ಕಪತ್ರಗಳನ್ನು, ದಾಖಲೆಗಳನ್ನು ಹಾಗೂ ಕಡತಗಳನ್ನು ನಿರ್ವಹಿಸಿ, ಹಗಲು ಯೋಕ್ಷೇಮ ಕೇಂದ್ರದಲ್ಲಿಯೇ ಇಡತಕ್ಕದ್ದು. ಸದರಿ ದಾಖಲೆಗಳನ್ನು ತನಿಖಾಧಿಕಾರಿಗಳು ಕೇಳಿದಾಗ ಒದಗಿಸಬೇಕು.
4. ಅನುದಾನ ಪಡೆದು, ವೆಚ್ಚ ಮಾಡಿರುವುದಕ್ಕೆ ಅಂಶವಾರು (Itemwise Expenditure) ಉಪಯೋಗತಾ ಪ್ರಮಾಣ ಪತ್ರವನ್ನು ಚಾರ್ಟೆಡ್ ಅಕೌಂಟೆಂಟ್‌ರವರಿಂದ ತಪಾಸಣೆಗೊಳಪಟ್ಟ ಲೆಕ್ಕಪತ್ರಗಳೊಂದಿಗೆ ಸಲ್ಲಿಸುವುದು.
5. ಪ್ರತಿ ವರ್ಷ ಅನುದಾನಕ್ಕಾಗಿ ಪ್ರಸ್ತಾವನೆಯನ್ನು ಎಲ್ಲಾ ಅಗತ್ಯ ದಾಖಲೆಗಳೊಂದಿಗೆ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳಿಗೆ ಸಲ್ಲಿಸುವುದು ಹಾಗು ಅನುದಾನವನ್ನು ತನಿಖಾಧಿಕಾರಿಗಳ ಶಿಫಾರಸ್ಸಿನ ಅಧಾರವ ಮೇಲೆಗೆ ಅನುಬಂಧ-1ರಲ್ಲಿನ ವಿವರಗಳ ಪ್ರಕಾರ ಪ್ರಧಾನ ಕಛೇರಿಯಿಂದ ಬಿಡುಗಡೆ ಮಾಡಲಾಗುವುದು.
6. ಸಂಸ್ಥೆಯು ಅನುದಾನವನ್ನು ತನ್ನ ಸ್ವಂತ ಹಕ್ಕೆಂದು ಕ್ಲೇಮು ಮಾಡುವಂತಿಲ್ಲ. ಹಣಕಾಸಿನ ಲಭ್ಯತೆಯ ಮಿತಿಗೆ ಒಳಪಟ್ಟು ಸರ್ಕಾರದ ವಿವೇಚನಾಧಿಕಾರದಲ್ಲಿ ಮಂಜೂರು ಮಾಡಲಾಗುವುದು.
7. ಹಗಲು ಯೋಗಕ್ಷೇಮ ಕೇಂದ್ರದಲ್ಲಿ ಗೌರವಧನ ಆಧಾರದ ಮೇಲೆ ತಾತ್ಕಾಲಿಕವಾಗಿ ಕಾರ್ಯನಿರ್ವಹಿಸುವ ಸಿಬ್ಬಂದಿಗಳಿಗೆ ಇರಬೇಕಾದ ವಿದ್ಯಾರ್ಹತೆ ವಿವರಗಳು (ಹಾಲಿ ನಡೆಯುತ್ತಿರುವ ಹಗಲು ಯೋಕ್ಷೇಮ ಕೇಂದ್ರಗಳಲ್ಲಿ ಈ ಕೆಳಗೆ ನಿಗದಿಪಡಿಸಿದ ವಿದ್ಯಾರ್ಹತೆಯ ಸಿಬ್ಬಂದಿಗಳು ಕಾರ್ಯನಿರ್ವಹಿಸದೆ ಇದ್ದಲ್ಲಿ, ಕಡ್ಡಾಯವಾಗಿ ನಿಗದಿಪಡಿಸಿದ ವಿದ್ಯಾರ್ಹತೆಯುಳ್ಳ ಸಿಬ್ಬಂದಿಗಳನ್ನೇ ನೇಮಿಸಿಕೊಳ್ಳುವುದು).

| ಕ್ರ.ಸಂ | ಪದನಾಮ | ಸಂಖ್ಯೆ | ವಿದ್ಯಾರ್ಹತೆ |
|---|---|---|---|
| 1 | ತರಬೇತಿ ಹೊಂದಿದ ಸಮಾಜ ವಿಷಯ ಪರಿಶೀಲಕರು | 1 | ಎಂ.ಎಸ್.ಡಬ್ಲ್ಯೂ/ಸ್ನಾತಕೋತರ ಪದವಿ/ ಮನೋ ತಜ್ಞರು |
| 2 | ಶುಷ್ರೂಷಕರು | 2 | ಹಿರಿಯ ನಾಗರಿಕರ ಶುಷ್ರೂಷೆಯಲ್ಲಿ ತರಬೇತಿ ಹೊಂದಿದವರು / Diplomo in Nursing ತರಬೇತಿ ಹೊಂದಿದವರು. |
| 3 | ಅಂಶಕಾಲಿಕ ವೈದ್ಯರು | 1 | ಎಂ.ಬಿ.ಬಿ.ಎಸ್. |
| 4 | ಸಹಾಯಕರು | 1 | ಎಸ್.ಎಸ್.ಎಲ್.ಸಿ ಉತ್ತೀರ್ಣ/ಅನುತ್ತೀರ್ಣ |

8. ಹಗಲು ಯೋಗಕ್ಷೇಮ ಕೇಂದ್ರಗಳ ಸಿಬ್ಬಂದಿಗಳನ್ನು ಗೌರವಧನದ ಆಧಾರದ ಮೇಲೆ ಪಾಲಕರ ಪೋಷಣೆ, ಸಂರಕ್ಷಣೆ ಹಾಗೂ ಹಿರಿಯ ನಾಗರಿಕರ ರಕ್ಷಣೆ ಕಾಯ್ದೆ 2007ರನ್ವಯ ರಚಿತವಾದ ಜಿಲ್ಲಾ ಮಟ್ಟದ ಸಮಿತಿಯಲ್ಲಿ ಅಥವಾ ಜಿಲ್ಲಾ ಮಟ್ಟದ ಸಮಿತಿಯು ನೇಮಿಸಿದ ಉಪಸಮಿತಿಯಲ್ಲಿ

ನಿಗದಿತ ವಿದ್ಯಾರ್ಹತೆಯಿರುವ ಸೇವಾ ಮನೋಭಾವವಿರುವ ಅಭ್ಯರ್ಥಿಗಳನ್ನು ನಿಯಮಾನುಸಾರ ತಾತ್ಕಾಲಿಕವಾಗಿ ನೇಮಿಸಿಕೊಳ್ಳುವುದು ಹಾಗೂ ಸಿಬ್ಬಂದಿಗಳಿಗೆ ಸಂಸ್ಥೆಯ ವತಿಯಿಂದ ನೇಮಕಾತಿ ಆದೇಶವನ್ನು ಹಗಲು ಯೋಗಕ್ಷೇಮ ಕೇಂದ್ರಗಳ ನಿವಾಸಿಗಳ ಕ್ಷೇಮಾಭಿವೃದ್ಧಿಗಾಗಿ ಕರ್ತವ್ಯ ನಿರ್ವಹಿಸಬೇಕೆಂಬ ಷರತ್ತಿನೊಂದಿಗೆ ನೀಡುವುದು.

9. ಸಿಬ್ಬಂದಿಗಳ ವೈಯುಕ್ತಿಕ ಕಡತಗಳನ್ನು ನಿರ್ವಹಿಸುವುದು ಹಾಗೂ ಪ್ರತಿ ಮಾಹೆ ಗೌರವ ಧನವನ್ನು ಚೆಕ್ ಮುಖಾಂತರ ಪಾವತಿಸುವುದು. ಸಿಬ್ಬಂದಿಗಳಿಗೆ ಸೇವಾ ಭದ್ರತೆಯನ್ನಾಗಲಿ ಅಥವಾ ನಿವೃತ್ತಿ ವೇತನವನ್ನಾಗಿ ಮಂಜೂರು ಮಾಡಲಾಗುವುದಿಲ್ಲ.
10. ಸಿಬ್ಬಂದಿಗಳ ಕಾರ್ಯವೈಖರಿಯ ಬಗ್ಗೆ ಸಂಸ್ಥೆಯ ಅಧ್ಯಕ್ಷರು/ಕಾರ್ಯದರ್ಶಿಗಳು/ಪ್ರತಿನಿಧಿಗಳು ಪರಿಶೀಲಿಸುವುದು.
11. ಸಿಬ್ಬಂದಿಗಳು ಮಾಸಿಕ ಒಂದು ರಜೆಯನ್ನು ಮಾತ್ರ ಪಡೆಯಬಹುದಾಗಿದ್ದು, ಗೈರು ಹಾಜರಾದಲ್ಲಿ ಗೌರವಧನದಲ್ಲಿ ಕಡಿತಗೊಳಿಸಬೇಕಾಗಿರುತ್ತದೆ.
12. ಸಿಬ್ಬಂದಿಗಳ ಕಾರ್ಯವೈಖರಿಯು ತೃಪ್ತಿಕರವಾಗಿಲ್ಲದಲ್ಲಿ, ಸಾಕಷ್ಟು ಪುರಾವೆಗಳೊಂದಿಗೆ ಜಿಲ್ಲಾ ಮಟ್ಟದ ಸಮಿತಿಯಲ್ಲಿ ವಿಷಯವನ್ನು ಮಂಡಿಸಿ 30 ದಿನಗಳ ಮುಂಗಡ ನೋಟೀಸ್ ಜಾರಿ ಮಾಡುವುದರ ಮೂಲಕ ಸಿಬ್ಬಂದಿಗಳನ್ನು ಕರ್ತವ್ಯದಿಂದ ಬಿಡುಗಡೆಗೊಳಿಸಬಹುದಾಗಿರುತ್ತದೆ. ಈ ರೀತಿಯಾಗಿ ತೆರವಾದ ಹುದ್ದೆಗಳನ್ನು ಜಿಲ್ಲಾ ಮಟ್ಟದ ಸಮಿತಿಯಲ್ಲಿ ಆಯ್ಕೆ ಮಾಡುವುದು.
13. ಹಗಲು ಯೋಗಕ್ಷೇಮ ಕೇಂದ್ರವನ್ನು ಶುಚಿಯಾಗಿಡುವುದು ಹಾಗೂ ನಿವಾಸಿಗಳಿಗೆ ಮಧ್ಯಾಹ್ನದ ಲಘು ಉಪಹಾರವನ್ನು ಶುಚಿಯಾಗಿ ನೀಡಲು ಸೂಕ್ತ ಸಮಯವನ್ನು ನಿಗದಿಗೊಳಿಸಿದ ಪ್ರತಿ ದಿನದ ಚಾರ್ಟ್ ಮೆನುವನ್ನು ತಯಾರಿಸಿ ಸೂಚನಾ ಫಲಕದಲ್ಲಿ ಹಾಕುವುದು.
14. ಹಗಲು ಯೋಕ್ಷೇಮ ಕೇಂದ್ರಗಳ ಕಟ್ಟಡವು ಈ ಕೆಳಕಂಡ ಕೊಠಡಿಗಳನ್ನು ಹೊಂದಿರಬೇಕು

| ಕ್ರ.ಸಂ | ಕೊಠಡಿಗಳ ವಿವರ | ಸಂಖ್ಯೆ | ವಿಸ್ತೀರ್ಣ |
|---|---|---|---|
| 1 | ಕಛೇರಿ ಕೊಠಡಿ (15' * 10' ಚದರ ಅಡಿ) | 1 | 150 ಚದರ ಅಡಿ |
| 2 | ಅಡುಗೆ ಮನೆ / ಉಗ್ರಾಣ (15' * 10' ಚದರ ಅಡಿ) | 1 | 150 ಚದರ ಅಡಿ |
| 3 | ಊಟದ ಕೋಣೆ / ಕಾಮನ್ ರೂಂ ( ಟಿ.ವಿ ಅಳವಡಿಸುವುದು) (25' * 20' ಚದರ ಅಡಿ) | 1 | 50 ಜನ ಕುಳಿತುಕೊಳ್ಳಲು ಸಾಕಷ್ಟು ಸ್ಥಳಾವಕಾಶ |
| 4 | ಆರೋಗ್ಯ ತಪಾಸಣಾ ಕೊಠಡಿ (10' * 10' ಚದರ ಅಡಿ) | 1 | 100 ಚದರ ಅಡಿ |
| 5 | ಗ್ರಂಥಾಲಯದ ಕೊಠಡಿ (15' * 10' ಚದರ ಅಡಿ) | 1 | 150 ಚದರ ಅಡಿ |
| 5 | ಸ್ನಾನದ ಗೃಹ (6' * 6' ಚದರ ಅಡಿ) | 1 | 36 ಚದರ ಅಡಿ |
| 6 | ಶೌಚಾಲಯಗಳು (ಪುರಷರಿಗೆ ಮಹಿಳೆಯರಿಗೆ ಪ್ರತ್ಯೇಕವಾಗಿ) (3' * 3' ಚದರ ಅಡಿ) | 4 | 36 ಚದರ ಅಡಿ |

15. ಕಟ್ಟಡವು ನೀರು, ವಿದ್ಯುತ್‌ನ ವ್ಯವಸ್ಥೆಯನ್ನು ಒಳಗೊಂಡ ಎಲ್ಲಾ ಮೂಲಭೂತ ಸೌಕರ್ಯಗಳನ್ನು ಹೊಂದಿರಬೇಕು.

16. ಸಂಸ್ಥೆಯು ವೃದ್ಧ ಫಲಾನುಭವಿಗಳಿಂದ ಯಾವುದೇ ವಿಧವಾದ ಶುಲ್ಕ ದೇಣಿಗೆ, ವಂತಿಗೆ ಹಣ ಮುಂತಾದವುಗಳನ್ನು ಸ್ವೀಕರಿಸುವಂತಿಲ್ಲ.
17. ನಿವಾಸಿಗಳ ಮನೋರಂಜನೆಗಾಗಿ ದಿನಪತ್ರಿಕೆಗಳು, ನಿಯತಕಾಲಿಕೆಗಳು ಟಿ.ವಿ., ಭಜನೆ, ಸಾಂಸ್ಕೃತಿಕ ಕಾರ್ಯಕ್ರಮಗಳು ಹಾಗೂ ಪ್ರವಾಸಗಳನ್ನು ಹಮ್ಮಿಕೊಳ್ಳಬೇಕು.
18. ಇಲಾಖೆಯು ನಿಗದಿಪಡಿಸಿದ ನಮೂನೆಗಳಲ್ಲಿ ನಿಯಮಿತವಾಗಿ ಪ್ರಗತಿ ವರದಿಗಳನ್ನು ನಿರ್ದೇಶನಾಲಯಕ್ಕೆ ಸಲ್ಲಿಸುವುದು.
19. ಸಂಸ್ಥೆಯು ಕಾರಣಾಂತರಗಳಿಂದ ಹಗಲು ಯೋಕ್ಷೇಮ ಕೇಂದ್ರವನ್ನು ಮುಚ್ಚಬೇಕಾದಲ್ಲಿ ಪಾಲಕರ ಪೋಷಣೆ, ಸಂರಕ್ಷಣೆ ಹಾಗೂ ಹಿರಿಯ ನಾಗರಿಕರ ರಕ್ಷಣೆ ಕಾಯ್ದೆ 2007ರನ್ವಯ ರಚಿತವಾದ ಜಿಲ್ಲಾ ಮಟ್ಟದ ಸಮಿತಿಯಲ್ಲಿ ಮಂಡಿಸಿ ಅದರ ಶಿಫಾರಸ್ಸಿನನ್ವಯ ನಿವಾಸಿಗಳಿಗೆ ಸೂಕ್ತ ಪರ್ಯಾಯ ವ್ಯವಸ್ಥೆ ಕಲ್ಪಿಸಿ ರದ್ದತಿಗೆ ನಿರ್ದೇಶನಾಲಯಕ್ಕೆ ಶಿಫಾರಸ್ಸು ಮಾಡುವುದು. ರದ್ದು ಮಾಡಲು ಸರ್ಕಾರದ ಆದೇಶ ಬಂದ ನಂತರ ಬೇರೆ ಸಂಸ್ಥೆಗೆ ಹಗಲು ಯೋಕ್ಷೇಮ ಕೇಂದ್ರವನ್ನು ನಡೆಸಲು ಆಡಳಿತಾತ್ಮಕ ಅನುಮತಿಗಾಗಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸುವುದು.
20. ಸಂಸ್ಥೆಯು ಪ್ರತಿ ವರ್ಷ ಅನುದಾನಕ್ಕೆ ಪ್ರಸ್ತಾವನೆ ಸಲ್ಲಿಸುವಾಗ, ಸಂಸ್ಥೆಯ ಆಡಳಿತ, ಆರ್ಥಿಕ ಸುಸ್ಥಿತಯ ಬಗ್ಗೆ, ಅನುದಾನವನ್ನು ಹಗಲು ಯೋಕ್ಷೇಮ ಕೇಂದ್ರವನ್ನು ನಿರ್ವಹಣೆಗೆ ಮಾತ್ರ ಉಪಯೋಗಿಸುತ್ತೇವೆಂದು, ಕಾರ್ಯಕ್ರಮಗಳನ್ನು ಯೋಜನೆಯನ್ವಯ ಯಶಸ್ವಿಯಾಗಿ ನಡೆಸುತ್ತೇವೆಂದು, ಕಾಲಕಾಲಕ್ಕೆ ಪ್ರಗತಿ ವರದಿಗಳನ್ನು ಸಲ್ಲಿಸುತ್ತೇವೆಂದು ಮತ್ತು ಅನುದಾನವು ದುರುಪಯೋಗವಾದಲ್ಲಿ ಅಥವಾ ರಾಜ್ಯ ಸರ್ಕಾರವು ಹೊರಡಿಸಿದ ಆದೇಶ/ಸೂಚನೆಗಳನ್ನು ಪಾಲಿಸದೆ ಇದ್ದಲ್ಲಿ ಹಗಲು ಯೋಗಕ್ಷೇಮ ಕೇಂದ್ರವನ್ನು ರದ್ದುಪಡಿಸಲು ಒಪ್ಪಿಕೊಳ್ಳುವುದಾಗಿ ಮತ್ತು ಸರ್ಕಾರದ ಹಣದ ದುರುಪಯೋಗದ ಆಪಾದನೆ ಮೇಲೆ ಶಿಕ್ಷೆಗೆ ಒಳಗಾಗಲು ಸಿದ್ಧರಿರುವುದಾಗಿ ಪ್ರಮಾಣೀಕರಿಸಬೇಕು.

<u>ಹೊಸಜಿಲ್ಲೆಗಳಲ್ಲಿ ಹಗಲು ಯೋಗಕ್ಷೇಮ ಕೇಂದ್ರಗಳ ರಚನೆ:</u>

1. ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಬಿಜಾಪುರ, ಚಿಕ್ಕಮಗಳೂರು, ಚಾಮರಾಜನಗರ, ದಾವಣಗೆರೆ, ಗದಗ, ಹಾವೇರಿ, ಕೊಡಗು, ಕೋಲಾರ, ಕೊಪ್ಪಳ, ಮಂಡ್ಯ, ಶಿವಮೊಗ್ಗ, ರಾಯಚೂರು, ಉತ್ತರಕನ್ನಡ ಮತ್ತು ಯಾದಗಿರಿ ಜಿಲ್ಲೆಗಳಲ್ಲಿ ಹಗಲು ಯೋಕ್ಷೇಮ ಕೇಂದ್ರವನ್ನು ಪ್ರಾರಂಭಿಸಲು ಇಚ್ಚಿಸುವ ಸಂಸ್ಥೆಗಳು ಆಯಾ ಜಿಲ್ಲೆಯಲ್ಲಿನ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು ಕರ್ನಾಟಕ ಪಾರದರ್ಶಕತೆ ಅಧಿನಿಯಮದಂತೆ ಅರ್ಜಿ ಸಲ್ಲಿಸುವಂತೆ ಪ್ರಕಟಣೆ ಹೊರಡಿಸಿದ ನಂತರ ನಿಗದಿತ ನಮೂನೆಯಲ್ಲಿ ಅರ್ಜಿ ಸಲ್ಲಿಸುವುದು.
2. ಸ್ವೀಕೃತವಾದ ಪ್ರಸ್ತಾವನೆಗಳನ್ನು ಪಾಲಕರ ಪೋಷಣೆ, ಸಂರಕ್ಷಣೆ ಹಾಗೂ ಹಿರಿಯ ನಾಗರಿಕರ ರಕ್ಷಣೆ ಕಾಯ್ದೆ 2007ರನ್ವಯ ರಚಿತವಾದ ಜಿಲ್ಲಾ ಮಟ್ಟದ ಸಮಿತಿಯಲ್ಲಿ ಮಂಡಿಸಿ, ಅದರ ಶಿಫಾರಸ್ಸಿನನ್ವಯ ಆಡಳಿತಾತ್ಮಕ ಮಂಜೂರಾತಿಗಾಗಿ ನಿರ್ದೇಶನಾಲಯದ ಮೂಲಕ ಸರ್ಕಾರಕ್ಕೆ ಸಲ್ಲಿಸುವುದು. ಸರ್ಕಾರದಿಂದ ಆಡಳಿತಾತ್ಮಕ ಮಂಜೂರಾತಿ ದೊರೆತ ನಂತರವೇ ಹಗಲು ಯೋಗಕ್ಷೇಮ ಕೇಂದ್ರವನ್ನು ಪ್ರಾರಂಭಿಸುವುದು.
3. ಅನುದಾನವನ್ನು ಹಗಲು ಯೋಗಕ್ಷೇಮ ಕೇಂದ್ರವನ್ನು ಪ್ರಾರಂಭಿಸಲು ಅನುಮತಿ ನೀಡಿದ ದಿನಾಂಕ/ಸಿಬ್ಬಂದಿಗಳ ನೇಮಕಾತಿ, ತನಿಖಾಧಿಕಾರಿಗಳ ಶಿಫಾರಸ್ಸು ಮತ್ತು ವಾಸ್ತವವಾಗಿ ಹಗಲು ಯೋಗಕ್ಷೇಮ ಕೇಂದ್ರವನ್ನು ಪ್ರಾರಂಭಿಸಿದ ದಿನಾಂಕ ಮುಂತಾದವುಗಳ ಆಧಾರದ ಮೇಲೆ ಲೆಕ್ಕಾಚಾರ ಮಾಡಲಾಗುವುದು. ಈ ವಿಷಯದಲ್ಲಿ ನಿರ್ದೇಶಕರ ತೀರ್ಮಾನವೇ ಅಂತಿಮವಾಗಿರುತ್ತದೆ.
4. 150 ಹಿರಿಯ ನಾಗರಿಕರ ಹಗಲು ಯೋಗಕ್ಷೇಮ ಕೇಂದ್ರದ ನಿರ್ವಹಣೆಗೆ ಅನುಬಂಧ-1ರಲ್ಲಿ ವಿವರಿಸಿರುವಂತೆ ಸಂಸ್ಥೆಯ ವತಿಯಿಂದ ಭರಿಸಬೇಕಾದ ಶೇ.10ರಷ್ಟು ವೆಚ್ಚವನ್ನು ಹೊರತುಪಡಿಸಿ

ಆವರ್ತಕ ಮತ್ತು ಅನಾವರ್ತಕ ವೆಚ್ಚಗಳನ್ನು ಭರಿಸಲು ರೂ.11.20 ಲಕ್ಷಗಳ ಅನುದಾನವನ್ನು ನೀಡಲಾಗುವುದು.

<u>ಹೊಸ ಹಗಲು ಯೋಗಕ್ಷೇಮ ಕೇಂದ್ರವನ್ನು ಪ್ರಾರಂಭಿಸಲು ಸಂಸ್ಥೆಗೆ ಇರಬೇಕಾದ ಅರ್ಹತೆಗಳು:</u>

1. ಸ್ವಯಂ ಸೇವಾ ಸಂಸ್ಥೆಯು ಅಸ್ತಿತ್ವಕ್ಕೆ ಬಂದು ಕನಿಷ್ಠ 2 ವರ್ಷಗಳಾಗಿರಬೇಕು
2. ಸ್ವಯಂ ಸೇವಾ ಸಂಸ್ಥೆಯು ಸಾಕಷ್ಟು ಸಿಬ್ಬಂದಿ ವರ್ಗದೊಂದಿಗೆ ಅಗತ್ಯವಾದ ಮೂಲಭೂತ ಸೌಲಭ್ಯ, ಸಂಪನ್ಮೂಲ ಹಾಗೂ ಅನುಭವ ಮತ್ತು ಆರ್ಥಿಕವಾಗಿ ಸುಸ್ಥಿತಿಯುಳ್ಳ ಆಡಳಿತ ವರ್ಗದವರನ್ನು ಹೊಂದಿರಬೇಕು.
3. ಸ್ವಯಂ ಸೇವಾ ಸಂಸ್ಥೆಯು ಹಗಲು ಯೋಗಕ್ಷೇಮ ಕೇಂದ್ರವ ನಡೆಸುವಲ್ಲಿ ಅಥವಾ ಇಂತಹದ್ದೇ ಇನ್ನಿತರ ಕಾರ್ಯಕ್ರಮಗಳನ್ನು ನಡೆಸುವಲ್ಲಿ ಅನುಭವ ಹೊಂದಿರಬೇಕು ಅಥವಾ ಹಗಲು ಯೋಗಕ್ಷೇಮ ಕೇಂದ್ರವ ನಡೆಸಲು ದಕ್ಷತೆಯನ್ನು ಹೊಂದಿರುವ ಬಗ್ಗೆ ದಾಖಲೆಗಳನ್ನು ಹಾಜರುಪಡಿಸಬೇಕು.
4. ಸಂಸ್ಥೆಯು ಯಾವುದೇ ಓರ್ವ ವ್ಯಕ್ತಿ ಅಥವಾ ಒಂದು ಜನಾಂಗದ ಲಾಭಕ್ಕಾಗಿ ನಡೆಸುತ್ತಿರಬಾರದು
5. ಸಂಸ್ಥೆಯು ಅಧಿಕೃತವಾಗಿ ರಚಿತವಾಗಿರುವ ಆಡಳಿತ ಮಂಡಳಿಯನ್ನು ಹೊಂದಿದ್ದು, ಆಡಳಿತ ವರ್ಗದ ಅಧಿಕಾರ, ಕರ್ತವ್ಯಗಳು ಮತ್ತು ಜವಾಬ್ದಾರಿಗಳನ್ನು ಸ್ಪಷ್ಟ ಹಾಗೂ ಖಚಿತವಾಗಿ ಸಂಸ್ಥೆಯ ಬರವಣಿಗೆಯಲ್ಲಿನ ನಿಬಂಧನೆಗಳಲ್ಲಿ ನಿರೂಪಿತವಾಗಿರಬೇಕು.
6. ಸಂಸ್ಥೆಯ ಸೇವೆಗಳು ಯಾವುದೇ ಜಾತಿ, ಪಂಥ, ಮತ ಮತ್ತು ಭಾಷೆಗಳನ್ನು ಪರಿಗಣಿಸದೇ ಎಲ್ಲರಿಗೂ ವರ್ಷದ ಎಲ್ಲಾ ಕಾಲದಲ್ಲಿಯೂ ಲಭ್ಯವಿರಬೇಕು
7. ಈ ಯೋಜನೆಯ ಉದ್ದೇಶಕ್ಕಾಗಿ ಸ್ವಯಂ ಸೇವಾ ಸಂಸ್ಥೆಗಳು ಯಾವುದೆಂದರೆ :
   (ಅ) ಇಂಡಿಯನ್-ಸೊಸೈಟೀಸ್ ರಿಜಿಸ್ಟ್ರೇಷನ್ ಆಕ್ಟ್ 1860ರ ಪ್ರಕಾರ ನೋಂದಣಿಯಾಗಿರುವ ಸಂಸ್ಥೆ..
   (ಆ) ಯಾವುದೇ ಲಾಭ ಉದ್ದೇಶವಿಲ್ಲದೇ ನೋಂದಣಿಯಾಗಿರುವ ಚಾರಿಟಬಲ್ ಕಂಪನಿ
   (ಇ) ಭಾರತದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಪ್ರಕಾರ ನೋಂದಣಿಯಾಗಿರುವ ಸಾರ್ವಜನಿಕ ಟ್ರಸ್ಟ್
   (ಈ) ನೋಂದಣಿಯಾಗಿ ಸಮಾಜ ಸೇವೆಯಲ್ಲಿ ತೊಡಗಿರುವ ಅಧಿಕಾರೇತರ ಸಂಸ್ಥೆಗಳು
   (ಉ) 1960ರ ಕರ್ನಾಟಕ ಸಂಘ ಸಂಸ್ಥೆಗಳ ಅಧಿನಿಯಮದ ಪ್ರಕಾರ ನೋಂದಣಿಯಾಗಿರುವ ಸಂಸ್ಥೆಗಳು.

8 ಇದೇ ಉದ್ದೇಶಕ್ಕಾಗಿ ಕೇಂದ್ರ ಸರ್ಕಾರದಿಂದಾಗಲೀ ಅಥವಾ ರಾಜ್ಯ ಸರ್ಕಾರದ ಇತರೆ ಇಲಾಖೆಗಳಿಂದಾಗಲೀ ಅನುದಾನ ಸ್ವೀಕರಿಸುತ್ತಿದ್ದಲ್ಲಿ ಈ ಯೋಜನೆಯಡಿ ಅನುದಾನ ಪಡೆಯಲು ಅರ್ಹವಾಗುವುದಿಲ್ಲ.

9 ಸಂಸ್ಥೆಯು ಪ್ರತಿ ವರ್ಷ ಅನುದಾನಕ್ಕೆ ಪ್ರಸ್ತಾವನೆ ಸಲ್ಲಿಸುವಾಗ, ಸಂಸ್ಥೆಯ ಆಡಳಿತ, ಆರ್ಥಿಕ ಸುಸ್ಥಿತಿಯ ಬಗ್ಗೆ, ಅನುದಾನವನ್ನು ಹಗಲು ಯೋಗಕ್ಷೇಮ ಕೇಂದ್ರದ ನಿರ್ವಹಣೆಗೆ ಮಾತ್ರ ಉಪಯೋಗಿಸುತ್ತೇವೆಂದು, ಕಾರ್ಯಕ್ರಮಗಳನ್ನು ಯೋಜನೆಯನ್ವಯ ಯಶಸ್ವಿಯಾಗಿ ನಡೆಸುತ್ತೇವೆಂದು, ಕಾಲಕಾಲಕ್ಕೆ ಪ್ರಗತಿ ವರದಿಗಳನ್ನು ಸಲ್ಲಿಸುತ್ತೇವೆಂದು ಮತ್ತು ಅನುದಾನವು ದುರುಪಯೋಗವಾದಲ್ಲಿ ಅಥವಾ ರಾಜ್ಯ ಸರ್ಕಾರವು ಹೊರಡಿಸಿದ ಆದೇಶ/ಸೂಚನೆಗಳನ್ನು ಪಾಲಿಸದೆ ಇದ್ದಲ್ಲಿ ಹಗಲು ಯೋಗಕ್ಷೇಮ ಕೇಂದ್ರವನ್ನು ರದ್ದುಪಡಿಸಲು ಒಪ್ಪಿಕೊಳ್ಳುವುದಾಗಿ ಮತ್ತು ಸರ್ಕಾರದ ಹಣದ ದುರುಪಯೋಗದ ಆಪಾದನೆ ಮೇಲೆ ಶಿಕ್ಷೆಗೆ ಒಳಗಾಗಲು ಸಿದ್ಧರಿರುವುದಾಗಿ ಪ್ರಮಾಣೀಕರಿಸಬೇಕು.

## ಅನುಬಂಧ-1

### ಹಗಲು ಯೋಗಕ್ಷೇಮ ಕೇಂದ್ರಗಳ ನಿರ್ವಹಣೆಗೆ ಪ್ರಸ್ತುತ ನೀಡಲಾಗುತ್ತಿರುವ ಹಾಗೂ ಹೆಚ್ಚಿಸಬೇಕಾದ ಅನುದಾನದ ವಿವರಗಳು

| ವಿವರ | ಪ್ರಸ್ತುತ ನೀಡಲಾಗುತ್ತಿರುವ ಅನುದಾನ | | ಒಟ್ಟು | ಹೆಚ್ಚಿಸಬೇಕಾದ ಅನುದಾನ | | ಒಟ್ಟು |
|---|---|---|---|---|---|---|
| ವರ್ತಕ ವೆಚ್ಚಗಳು | | | | | | |
| ರಬೇತಿ ಪಡೆದ ಸಮಾಜ ವಿಷಯ ರಿಶೀಲಕರು | 5000x12 | | 60000 | 10000x12 | | 120000 |
| ಂಶಕಾಲಿಕ ವೈದ್ಯರಿಗೆ ಗೌರವಧನ | 250x4x12 | | 12000 | 500x4x12 | | 24000 |
| ಹಾಯಕರಿಗೆ ಗೌರವಧನ | 2000x12 | | 24000 | 4000x12 | | 48000 |
| ಚಪ್ರಕರಿಗ ಗೌರವಧನ | 5000x12x2 | | 120000 | 10000x12x2 | | 240000 |
| ತ್ತಡದ ಬಾಡಿಗೆ | 5000x12 | For Bangalore 7500/- | 60000 | 10000x12 | For Baangalore 15000/-* | 120000 |
| ನಪತ್ರಿಕೆ, ನಿಯತಕಾಲಿಕೆಗಳು | 750x12 | | 9000 | 1000x12 | | 12000 |
| ದ್ಯಕೀಯ ವೆಚ್ಚ | 2500x12 | | 30000 | 5000x12 | | 60000 |
| ಘು ಉಪಹಾರ | 5x30x50x12 | | 90000 | 25x30x50x12 | | 450000 |
| ತರೆ ವೆಚ್ಚಗಳು (ಲೇಖನ ಸಾಮಗ್ರಿ, ೂರವಾಣಿ, ಪ್ರಯಾಣ ಭತ್ಯೆ ಇತರೆ) | - | | 10000 | - | - | 20000 |
| ಾವರ್ತಕ ವೆಚ್ಚಗಳು | – | - | 100000 | | | 150000 |
| | ಒಟ್ಟು ರೂ. | | 5,15,000 | | | 12,44,000 |
| | ಸಂಸ್ಥೆಯಿಂದ ಭರಿಸಬೇಕಾದ ಶೇ.10ರಷ್ಟು ಅನುದಾನ | | | | | 1,24,400 |
| | | | | | ನಿವ್ವಳ ಅನುದಾನ ರೂ. | 11,19,600 |

ಂಗಳೂರು ನಗರದಲ್ಲಿ ಬಾಡಿಗೆ ಮೊತ್ತವನ್ನು ರೂ.15000/-ಗಳಿಗೆ ಸೀಮಿತಗೊಳಿಸಿ ಲೆಕ್ಕಚಾರಮಾಡಲಾಗುವುದು, ಅದರಂತೆ ಅನುದಾನ ನೀಡುವಿಕೆಯಲ್ಲಿ ಷ್ಕರಣೆಯಾಗುವುದು)

9/6/14

ನಿರ್ದೇಶಕರು,
ವಿಕಲಚೇತನರ ಹಾಗೂ ಹಿರಿಯ ನಾಗರಿಕರ
ಸಬಲೀಕರಣ ಇಲಾಖೆ, ಬೆಂಗಳೂರು.

4-[illegible] Yojane/E/JD

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಜಿಲ್ಲಾ ವಲಯದಡಿ ಜಿಲ್ಲಾ ಪಂಚಾಯತ್ ಮೂಲಕ ನಡೆಸಲಾಗುತ್ತಿರುವ ವೃದ್ಧಾಶ್ರಮಗಳಿಗೆ ಪ್ರಸ್ತುತ ನೀಡುತ್ತಿರುವ ವಾರ್ಷಿಕ ಅನುದಾನ ರೂ.1.96ಲಕ್ಷಗಳಿಂದ ರೂ.8.00ಲಕ್ಷಗಳಿಗೆ ಹೆಚ್ಚಿಸುವ ಹಾಗೂ ಹೊಸದಾಗಿ ರಚನೆಯಾದ ಯಾದಗಿರಿ, ರಾಮನಗರ ಹಾಗೂ ಉಡುಪಿ ಜಿಲ್ಲೆಗಳಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಮೂಲಕ ವೃದ್ಧಾಶ್ರಮವನ್ನು ಪ್ರಾರಂಭಿಸಲು ಆಡಳಿತಾತ್ಮಕ ಮಂಜೂರಾತಿ ನೀಡುವ ಕುರಿತು.

ಓದಲಾಗಿದೆ: 1) ಸರ್ಕಾರದ ಆದೇಶ ಸಂಖ್ಯೆ: ಮಮಇ/258/ಪಿಹೆಚ್‌ಪಿ/95 ದಿನಾಂಕ:29-09-1995.

2) ಮಾನ್ಯ ಮುಖ್ಯಮಂತ್ರಿಗಳು ದಿನಾಂಕ:12-07-2013ರಂದು ಮಂಡಿಸಿದ ಆಯವ್ಯಯ ಭಾಷಣದ ಕಂಡಿಕೆ 233ರಲ್ಲಿ ಘೋಷಿಸಿದಂತೆ.

3) ನಿರ್ದೇಶಕರು, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ವಿಹಿನಾಸಇ/ಹಿ.ನಾ.ವಿ/ಸಿ.2/ರಾ.ವೃ.ಅ/ಹೆಚ್ಚಳ/12/2013-14/1354 ದಿನಾಂಕ;23-07-2013.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಮೂಲಕ ಜಿಲ್ಲೆಗೆ ಒಂದು ವೃದ್ಧಾಶ್ರಮವನ್ನು ಪ್ರಾರಂಭಿಸಲು ಹಾಗೂ 25 ವೃದ್ಧರ ಪ್ರತಿ ವೃದ್ಧಾಶ್ರಮಕ್ಕೆ ವಾರ್ಷಿಕವಾಗಿ ರೂ.1.96ಲಕ್ಷಗಳ ಅನುದಾನವನ್ನು (ಸಂಸ್ಥೆಗಳಿಂದ ಭರಿಸುವ ಶೆ.10ರಷ್ಟು ಹೊರತುಪಡಿಸಿ) ಆವರ್ತಕ ವೆಚ್ಚಗಳನ್ನು ಭರಿಸಲು ಅನುಮತಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದಂತೆ, ಮಾನ್ಯ ಮುಖ್ಯಮಂತ್ರಿಗಳು ದಿನಾಂಕ:12-07-2013ರಂದು ಮಂಡಿಸಿರುವ 2013-14ನೇ ಸಾಲಿನ ಆಯವ್ಯಯದಲ್ಲಿ ಭಾಷಣದ ಕಂಡಿಕೆ 233ರಲ್ಲಿ ಹಿರಿಯ ನಾಗರಿಕರಿಗೆ ಸಂಬಂಧಪಟ್ಟಂತೆ ವೃದ್ಧಾಶ್ರಮಗಳಿಗೆ ಈಗ ನೀಡುತ್ತಿರುವ ವಾರ್ಷಿಕ ಅನುದಾನವನ್ನು ರೂ.1.96ಲಕ್ಷಗಳಿಂದ ರೂ.8.00ಲಕ್ಷಗಳಿಗೆ ಹೆಚ್ಚಿಸಲಾಗಿದೆಯೆಂದು ಹಾಗೂ ಈ ಯೋಜನೆಯನ್ನು ಹೊಸ ಜಿಲ್ಲೆಗಳಾದ ಯಾದಗಿರಿ, ರಾಮನಗರ ಹಾಗು ಉಡುಪಿ ಜಿಲ್ಲೆಗಳಿಗೆ ವಿಸ್ತರಿಸಿ ಘೋಷಿಸಿರುತ್ತಾರೆ.

ಅದರಂತೆ, ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರು ಸ್ವಯಂ ಸೇವಾ ಸಂಸ್ಥೆಗಳ ಮೂಲಕ ಜಿಲ್ಲಾ ವಲಯದಡಿ ಅನುಷ್ಠಾನಗೊಳಿಸಲಾಗುತ್ತಿರುವ 25 ವೃದ್ಧರನ್ನು ಹೊಂದಿರುವ ವೃದ್ಧಾಶ್ರಮವೊಂದಕ್ಕೆ ಭರಿಸಬಹುದಾದ ವಿವಿಧ ಬಾಬ್ತುಗಳಾದ ಆವರ್ತಕ ವೆಚ್ಚಗಳಿಗೆ ಅಂದರೆ, ಸಿಬ್ಬಂದಿ ಗೌರವಧನ, ಕಟ್ಟಡ ಬಾಡಿಗೆ, ಊಟದ ವೆಚ್ಚ, ಔಷಧೋಪಚಾರ, ಎಣ್ಣೆ, ಸೋಪು, ವಿದ್ಯುತ್, ನೀರಿನ ವೆಚ್ಚ, ಮನೋರಂಜನಾ ವೆಚ್ಚ ಹಾಗೂ ಇತರೆ ವೆಚ್ಚಗಳಿಗೆ ರೂ.8.00ಲಕ್ಷಗಳಿಗೆ ಹೆಚ್ಚಿಸಲು ಹಾಗೂ ಹೊಸ ಜಿಲ್ಲೆಗಳಾದ ಯಾದಗಿರಿ, ರಾಮನಗರ ಹಾಗೂ ಉಡುಪಿ ಜಿಲ್ಲೆಗಳಿಗೆ ವೃದ್ಧಾಶ್ರಮಗಳನ್ನು ಪ್ರಾರಂಭಿಸಲು ಆಡಳಿತಾತ್ಮಕ ಮಂಜೂರಾತಿ ನೀಡುವಂತೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿದ್ದು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 264 ಪಿಹೆಚ್‌ಪಿ 2013, ಬೆಂಗಳೂರು**

**ದಿನಾಂಕ: 28-08-2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ವತಿಯಿಂದ ಜಿಲ್ಲಾ ವಲಯದಡಿ ಅನುಷ್ಠಾನಗೊಳಿಸಲಾಗುತ್ತಿರುವ 25 ವೃದ್ಧರನ್ನು



ಹೊಂದಿರುವ ವೃದ್ಧಾಶ್ರಮವೊಂದಕ್ಕೆ ಭರಿಸಬಹುದಾದ ಆವರ್ತಕ ವೆಚ್ಚಗಳಿಗೆ ಅಂದರೆ, ಸಿಬ್ಬಂದಿ ಗೌರವಧನ, ಕಟ್ಟಡ ಬಾಡಿಗೆ, ಊಟದ ವೆಚ್ಚ, ಔಷದೋಪಚಾರ, ಎಣ್ಣೆ ಸೋಪು, ವಿದ್ಯುತ್, ನೀರಿನ ವೆಚ್ಚ, ಮನೋರಂಜನಾ ವೆಚ್ಚ ಹಾಗೂ ಇತರೆ ವೆಚ್ಚಗಳಿಗೆ ರೂ.8.00ಲಕ್ಷಗಳ (ರೂ.ಎಂಟು ಲಕ್ಷಗಳು ಮಾತ್ರ) ಅನುದಾನ ಅನುಬಂಧ-1ರಲ್ಲಿ ವಿವರಿಸಿರುವಂತೆ ನೀಡಲು ಉಲ್ಲೇಖ(1)ರ ಸರ್ಕಾರಿ ಆದೇಶವನ್ನು ಮಾರ್ಪಡಿಸಿ, ಅನುಬಂಧ-2ರಲ್ಲಿ ಲಗತ್ತಿಸಿರುವ ಮಾರ್ಗಸೂಚಿಗಳನ್ನು ಹಾಗೂ ಸರ್ಕಾರ/ಇಲಾಖೆಯು ಕಾಲಕಾಲಕ್ಕೆ ಹೊರಡಿಸುವ ಆದೇಶ/ಸುತ್ತೋಲೆಗಳನ್ನು ಕಟ್ಟುನಿಟ್ಟಾಗಿ ಪಾಲಿಸುವ ಷರತ್ತಿಗೊಳಪಟ್ಟು ಮಂಜೂರಾತಿ ನೀಡಲಾಗಿದೆ ಹಾಗೂ ಹೊಸ ಜಿಲ್ಲೆಗಳಾದ ಯಾದಗಿರಿ, ರಾಮನಗರ ಹಾಗು ಉಡುಪಿ ಜಿಲ್ಲೆಗಳಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಮುಖಾಂತರ ವೃದ್ಧಾಶ್ರಮಗಳನ್ನು 2013-14ನೇ ಸಾಲಿನಿಂದ ಪ್ರಾರಂಭಿಸಲು ಆಡಳಿತಾತ್ಮಕ ಅನುಮತಿ ನೀಡಲಾಗಿದೆ.

ಈ ವೆಚ್ಚವನ್ನು 2013-14ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ:2235-02-196-1-03 ಜಿಲ್ಲಾ ಪಂಚಾಯತ್ ವಲಯದ Lumpsum ರಡಿಯಲ್ಲಿ ಒದಗಿಸಿರುವ ಅನುದಾನದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ 564 ವೆಚ್ಚ-3 2013. ದಿ: 28.08.2013 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಬಿ.ಕಮಲಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ.

ಇವರಿಗೆ:

1) ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು
2) ನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ಬೆಂಗಳೂರು.
3) ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಗೋಪುರ, ಬೆಂಗಳೂರು.
4) ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ.
5) ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್, ಬೆಂಗಳೂರು ನಗರ ಜಿಲ್ಲೆ.
6) ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ನಗರ ಜಿಲ್ಲೆ.
7) ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ.
8) ಖಜಾನಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ.
9) ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿಗಳು.

## ಸರ್ಕಾರದ ಆದೇಶ ಸಂಖ್ಯೆ: ಮಮಇ 264 ಪಿಹೆಚ್‌ಪಿ 2013, ಬೆಂಗಳೂರು ದಿನಾಂಕ: 28-08-2013

### ಅನುಬಂಧ-1

| ಪ್ರಸ್ತುತ ನೀಡುತ್ತಿರುವ ಅನುದಾನದ ಮೊತ್ತ | | | | ಆಯವ್ಯಯ ಘೋಷಣೆಯಲ್ಲಿ ಘೋಷಿಸಿದಂತೆ ರೂ.8.00ಲಕ್ಷಗಳಿಗೆ ಸರಿದೂಗಿಸಿದ ಅನುದಾನ | | ಷರಾ |
|---|---|---|---|---|---|---|
| ವಿವರ | ಸಿಬ್ಬಂದಿ ಸಂಖ್ಯೆ | ಮಾಸಿಕ ನೀಡುವ ಮೊತ್ತ | ಮೊತ್ತ | ಮಾಸಿಕ ನೀಡುವ ಮೊತ್ತ | ಮೊತ್ತ | |
| 1.ಅಧೀಕ್ಷಕರು/ವಾರ್ಡನ್ | 1 | 1500*12 | 18000 | ರೂ.9000*12 | 108000 | |
| 2.ಸಮಾಜ ಸೇವಕರು | 1 | 2000*12 | 24000 | ರೂ.8500*12 | 102000 | |
| 3.ದಾದಿ/ಮಿಡ್‌ವೈಫ್ | 1 | 600*12 | 7200 | ರೂ.6500*12 | 78000 | |
| 4.ಅಡುಗೆಯವರು | 1 | 500*12 | 6000 | ರೂ.5000*12 | 60000 | |
| 5.ಸಹಾಯಕರು | 1 | 500*12 | 6000 | ರೂ.4000*12 | 48000 | |
| 6.ಕಾವಲುಗಾರರು | 1 | 500*12 | 6000 | ರೂ.4000*12 | 48000 | |
| 7.ಅರೆಕಾಲಿಕ ವೈದ್ಯರು | 1 | 175*4*12 | 8400 | ರೂ.500*4*12 | 24000 | |
| **ಒಟ್ಟು ಗೌರವಧನ** | | | **75,600** | **ಒಟ್ಟು ಗೌರವಧನ** | **4,68,000** | |
| **ಕಟ್ಟಡದ ಬಾಡಿಗೆ/ನಿರ್ವಹಣೆಗೆ** | | | 24000 | ರೂ.5000*12 | 60000 | |
| | | | **24,000** | | **60,000** | |
| 1. ಊಟದ ವೆಚ್ಚ (25 ಫಲಾನುಭವಿಗಳಿಗೆ) | | | 90000 | 25*ರೂ.35*365 | 320000 | (ರೂ.319375/-ಗಳನ್ನು ರೂ.320000/-ಗಳಿಗೆ ಪೂರ್ಣಾಂಕಗೊಳಿಸಿದೆ) |
| 2. ಔಷಧಿ ವೆಚ್ಚ (25 ಫಲಾನುಭವಿಗಳಿಗೆ) | | | 6000 | | 12000 | |
| 3. ಬಟ್ಟೆ, ಎಣ್ಣೆ ಸೋಪು ಇತ್ಯಾದಿ | | | 7500 | | 12000 | |
| 4. ವಿದ್ಯುತ್ ಮತ್ತು ನೀರಿನ ವೆಚ್ಚಗಳು ಮತ್ತು ಅನಿವಾರ್ಯ ವೆಚ್ಚಗಳು | | | 9000 | | 10000 | |
| 5. ಮನೋರಂಜನಾ ವೆಚ್ಚಗಳು | | | 6000 | | 7000 | |
| | | | **1,18,500** | | **3,61,000** | |
| **ಅನಾವರ್ತಕ ವೆಚ್ಚಗಳು** | | | - | | | |
| ಮಂಚಗಳು | | 500*25 | 12500 | | - | |
| ಹೊದಿಕೆಗಳು | | 800*25 | 20000 | | - | |
| ಪಾತ್ರೆಗಳು | | - | 6000 | | - | |
| ಪೀಠೋಪಕರಣಗಳು | | - | 15000 | | - | |
| ರಿವಾಲ್ವಿಂಗ್ ಫಂಡ್ | | - | 10000 | | - | |
| | | | **63,500** | | - | |
| ಒಟ್ಟು | | | **281600** | | 8,89,000 | |
| ಸಂಸ್ಥೆಯು ವತಿಯಿಂದ ಭರಿಸಬೇಕಾದ ಶೇ.10ರಷ್ಟು ಅನುದಾನ | | | **28160** | | 88,900 | |
| ಪ್ರಥಮ ವರ್ಷ ನೀಡುವ ನಿವ್ವಳ ಅನುದಾನದ ಮೊತ್ತ | | | **2,53,440** | | **8,00,100** | |
| ನಂತರದ ವರ್ಷಗಳಲ್ಲಿ ರೂ.218100/-ಗಳ ಆವರ್ತಕ ವೆಚ್ಚದ ಶೇ.90ರಷ್ಟು ಅನುದಾನ ನೀಡಲಾಗುವುದು. | | | **1,96,290** | | **8,00,000** | (ರೂ.8,00,100/-ಗಳನ್ನು ರೂ.8,00,000/-ಗಳಿಗೆ ಪೂರ್ಣಾಂಕಗೊಳಿಸಿದೆ) |

ಸರ್ಕಾರದ ಆದೇಶ ಸಂಖ್ಯೆ: ಮಮಇ 264 ಪಿಹೆಚ್‌ಪಿ 2013, ಬೆಂಗಳೂರು ದಿನಾಂಕ: 28-08-2013

ಅನುಬಂಧ-2

1. ನಿರ್ಗತಿಕ, ಬಡತನ ರೇಖೆಗಿಂತ ಕೆಳಗಿರುವ 25 ಹಿರಿಯ ನಾಗರಿಕರ ವೃದ್ಧಾಶ್ರಮದ ನಿರ್ವಹಣೆಗೆ ಅನುಬಂಧ-1ರಲ್ಲಿ ವಿವರಿಸಿರುವಂತೆ ಸಂಸ್ಥೆಯ ವತಿಯಿಂದ ಭರಿಸಬೇಕಾದ ಶೇ.10ರಷ್ಟು ವೆಚ್ಚವನ್ನು ಹೊರತುಪಡಿಸಿ ಆವರ್ತಕ ವೆಚ್ಚಗಳನ್ನು ಭರಿಸಲು ರೂ.8.00ಲಕ್ಷಗಳ ಅನುದಾನ ನೀಡಲಾಗುವುದು.

2. ಅನುದಾನವನ್ನು ಪೂರ್ವಾನ್ವಯವಾಗಿ ಮಂಜೂರು ಮಾಡುವಂತಿಲ್ಲ.

3. ಸಂಸ್ಥೆಯು ವೃದಾಶ್ರಮಕ್ಕೆ ಸಂಬಂಧಿಸಿದಂತೆ ಪ್ರತ್ಯೇಕ ಅಗತ್ಯ ಲೆಕ್ಕಪತ್ರಗಳನ್ನು, ದಾಖಲೆಗಳನ್ನು ಹಾಗೂ ಕಡತಗಳನ್ನು ನಿರ್ವಹಿಸಿ, ವೃದ್ಧಾಶ್ರಮ ನಡೆಯುವ ಕಛೇರಿಯಲ್ಲಿಯೇ ಇಡತಕ್ಕದ್ದು. ಸದರಿ ದಾಖಲೆಗಳನ್ನು ಇಲಾಖೆಯ/ಜಿಲ್ಲಾಪಂಚಾಯತ್‌ನ ತನಿಖಾಧಿಕಾರಿಗಳು ಕೇಳಿದಾಗ ಒದಗಿಸಬೇಕು.

4. ಅನುದಾನ ಪಡೆದು, ವೆಚ್ಚ ಮಾಡಿರುವುದಕ್ಕೆ ಅಂಶವಾರು (Itemwise Expenditure) ಉಪಯೋಗತಾ ಪ್ರಮಾಣ ಪತ್ರವನ್ನು ಚಾರ್ಟೆಡ್ ಅಕೌಂಟೆಂಟ್‌ರವರಿಂದ ತಪಾಸಣೆಗೊಳಪಟ್ಟ ಲೆಕ್ಕಪತ್ರಗಳೊಂದಿಗೆ ಸಲ್ಲಿಸುವುದು.

5. ಪ್ರತಿ ವರ್ಷ ಅನುದಾನಕ್ಕಾಗಿ ಪ್ರಸ್ತಾವನೆಯನ್ನು ಎಲ್ಲಾ ಅಗತ್ಯ ದಾಖಲೆಗಳೊಂದಿಗೆ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳಿಗೆ ಸಲ್ಲಿಸುವುದು ಹಾಗು ಅನುದಾನವನ್ನು ತನಿಖಾಧಿಕಾರಿಗಳ ಶಿಫಾರಸ್ಸಿನ ಆಧಾರದ ಮೇರೆಗೆ ಅನುಬಂಧ-1ರಲ್ಲಿನ ವಿವರಗಳ ಪ್ರಕಾರ ಜಿಲ್ಲಾಪಂಚಾಯತ್‌ನ ಮುಖ್ಯನಿರ್ವಹಣಾಧಿಕಾರಿಗಳ ವಿವೇಚನಾಧಿಕಾರದಲ್ಲಿ ಲೆಕ್ಕಾಚಾರ ಮಾಡಲಾಗುವುದು.

6. ಸಂಸ್ಥೆಯು ಅನುದಾನವನ್ನು ತನ್ನ ಸ್ವಂತ ಹಕ್ಕೆಂದು ಕ್ಲೇಮು ಮಾಡುವಂತಿಲ್ಲ. ಹಣಕಾಸಿನ ಲಭ್ಯತೆಯ ಮಿತಿಗೆ ಒಳಪಟ್ಟು ಜಿಲ್ಲಾ ಪಂಚಾಯತಿಯಿಂದ ಅಥವಾ ಸರ್ಕಾರದ ವಿವೇಚನಾಧಿಕಾರದಲ್ಲಿ ಮಂಜೂರು ಮಾಡಲಾಗುವುದು.

7. ವೃದ್ಧಾಶ್ರಮದಲ್ಲಿ ಗೌರವಧನ ಆಧಾರದ ಮೇಲೆ ತಾತ್ಕಾಲಿಕವಾಗಿ ಕಾರ್ಯನಿರ್ವಹಿಸುವ ಸಿಬ್ಬಂದಿಗಳಿಗೆ ಇರಬೇಕಾದ ವಿದ್ಯಾರ್ಹತೆ ವಿವರಗಳು (ಹಾಲಿ ನಡೆಯುತ್ತಿರುವ ವೃದ್ಧಾಶ್ರಮಗಳಲ್ಲಿ ಈ ಕೆಳಗೆ ನಿಗದಿಪಡಿಸಿದ ವಿದ್ಯಾರ್ಹತೆಯ ಸಿಬ್ಬಂದಿಗಳು ಕಾರ್ಯನಿರ್ವಹಿಸದೆ ಇದ್ದಲ್ಲಿ, ಕಡ್ಡಾಯವಾಗಿ ನಿಗದಿಪಡಿಸಿದ ವಿದ್ಯಾರ್ಹತೆಯುಳ್ಳ ಸಿಬ್ಬಂದಿಗಳನ್ನೇ ನೇಮಿಸಿಕೊಳ್ಳುವುದು).

| ಕ್ರ.ಸಂ | ಪದನಾಮ | ಸಂಖ್ಯೆ | ವಿದ್ಯಾರ್ಹತೆ |
|---|---|---|---|
| 1 | ಅಧೀಕ್ಷಕರು/ವಾರ್ಡನ್ | 1 | ಸ್ನಾತಕೋತ್ತರ ಪದವಿ |
| 2 | ಸಮಾಜ ಸೇವಕರು | 1 | ಎಂ.ಎಸ್.ಡಬ್ಲ್ಯೂ |
| 3 | ದಾದಿ/ಮಿಡ್‌ವೈಫ್ | 1 | ಡಿಪ್ಲೊಮ ಇನ್ ನರ್ಸಿಂಗ್ |
| 4 | ಅಡುಗೆಯವರು | 1 | ಎಸ್.ಎಸ್.ಎಲ್.ಸಿ ಉತ್ತೀರ್ಣ/ಅನುತ್ತೀರ್ಣ |
| 5 | ಸಹಾಯಕರು | 1 | 4ನೇ ತರಗತಿ |
| 6 | ಕಾವಲುಗಾರರು | 1 | 7ನೇ ತರಗತಿ |
| 7 | ಅರೆಕಾಲಿಕ ವೈದ್ಯರು | 1 | ವೈದ್ಯಕೀಯ ಪದವಿ |

8. ವೃದ್ಧಾಶ್ರಮದ ಸಿಬ್ಬಂದಿಗಳನ್ನು ಗೌರವಧನದ ಆಧಾರದ ಮೇಲೆ ಪಾಲಕರ ಪೋಷಣೆ, ಸಂರಕ್ಷಣೆ ಹಾಗೂ ಹಿರಿಯ ನಾಗರಿಕರ ರಕ್ಷಣೆ ಕಾಯ್ದೆ 2007ರನ್ವಯ ರಚಿತವಾದ ಜಿಲ್ಲಾ ಮಟ್ಟದ ಸಮಿತಿಯಲ್ಲಿ ಅಥವಾ ಜಿಲ್ಲಾ ಮಟ್ಟದ ಸಮಿತಿಯು ನೇಮಿಸಿದ ಉಪಸಮಿತಿಯಲ್ಲಿ ನಿಗದಿತ ವಿದ್ಯಾರ್ಹತೆಯಿರುವ ಸೇವಾ ಮನೋಭಾವವಿರುವ ಅಭ್ಯರ್ಥಿಗಳನ್ನು ನಿಯಮಾನುಸಾರ ತಾತ್ಕಾಲಿಕವಾಗಿ ನೇಮಿಸಿಕೊಳ್ಳುವುದು ಹಾಗೂ ಸಿಬ್ಬಂದಿಗಳಿಗೆ ಸಂಸ್ಥೆಯ ವತಿಯಿಂದ ನೇಮಕಾತಿ ಆದೇಶವನ್ನು ವೃದ್ಧಾಶ್ರಮದ ನಿವಾಸಿಗಳ ಕ್ಷೇಮಾಭಿವೃದ್ಧಿಗಾಗಿ ಕರ್ತವ್ಯ ನಿರ್ವಹಿಸಬೇಕೆಂಬ ಷರತ್ತಿನೊಂದಿಗೆ ನೀಡುವುದು.

..2

9. ಸಿಬ್ಬಂದಿಗಳ ವೈಯುಕ್ತಿಕ ಕಡತಗಳನ್ನು ನಿರ್ವಹಿಸುವುದು ಹಾಗೂ ಪ್ರತಿ ಮಾಹೆ ಗೌರವ ಧನವನ್ನು ಚೆಕ್ ಮುಖಾಂತರ ಪಾವತಿಸುವುದು. ಸಿಬ್ಬಂದಿಗಳಿಗೆ ಸೇವಾ ಭದ್ರತೆಯನ್ನಾಗಲಿ ಅಥವಾ ನಿವೃತ್ತಿ ವೇತನವನ್ನಾಗಿ ಮಂಜೂರು ಮಾಡಲಾಗುವುದಿಲ್ಲ.

10. ಸಿಬ್ಬಂದಿಗಳ ಕಾರ್ಯವೈಖರಿಯ ಬಗ್ಗೆ ಸಂಸ್ಥೆಯ ಅಧ್ಯಕ್ಷರು/ಕಾರ್ಯದರ್ಶಿಗಳು/ಪ್ರತಿನಿಧಿಗಳು ಪರಿಶೀಲಿಸುವುದು.

11. ಸಿಬ್ಬಂದಿಗಳು ಮಾಸಿಕ ಒಂದು ರಜೆಯನ್ನು ಮಾತ್ರ ಪಡೆಯಬಹುದಾಗಿದ್ದು, ಗೈರು ಹಾಜರಾದಲ್ಲಿ ಗೌರವಧನದಲ್ಲಿ ಕಡಿತಗೊಳಿಸಬೇಕಾಗಿರುತ್ತದೆ.

12. ಸಿಬ್ಬಂದಿಗಳ ಕಾರ್ಯವೈಖರಿಯು ತೃಪ್ತಿಕರವಾಗಿಲ್ಲದಲ್ಲಿ, ಸಾಕಷ್ಟು ಪುರಾವೆಗಳೊಂದಿಗೆ ಜಿಲ್ಲಾ ಮಟ್ಟದ ಸಮಿತಿಯಲ್ಲಿ ವಿಷಯವನ್ನು ಮಂಡಿಸಿ 30 ದಿನಗಳ ಮುಂಗಡ ನೋಟೀಸ್ ಜಾರಿ ಮಾಡುವುದರ ಮೂಲಕ ಸಿಬ್ಬಂದಿಗಳನ್ನು ಕರ್ತವ್ಯದಿಂದ ಬಿಡುಗಡೆಗೊಳಿಸಬಹುದಾಗಿರುತ್ತದೆ. ಈ ರೀತಿಯಾಗಿ ತೆರವಾದ ಹುದ್ದೆಗಳನ್ನು ಜಿಲ್ಲಾ ಮಟ್ಟದ ಸಮಿತಿಯಲ್ಲಿ ಆಯ್ಕೆ ಮಾಡುವುದು.

13. ವೃದ್ಧಾಶ್ರಮವನ್ನು ಶುಚಿಯಾಗಿಡುವುದು ಹಾಗೂ ನಿವಾಸಿಗಳಿಗೆ ಬೆಳಿಗ್ಗೆ ಕಾಫಿ/ಟೀ, ಉಪಹಾರ, ಮಧ್ಯಾಹ್ನದ ಊಟ, ಸಂಜೆಯ ಕಾಫಿ/ಟೀ ಮತ್ತು ರಾತ್ರಿ ವೇಳೆಯ ಊಟವನ್ನು ಶುಚಿಯಾಗಿ ನೀಡಲು ಸೂಕ್ತ ಸಮಯವನ್ನು ನಿಗದಿಗೊಳಿಸಿದ ಪ್ರತಿ ದಿನದ ಚಾರ್ಟ್ ಮೆನುವನ್ನು ತಯಾರಿಸಿ ಸೂಚನಾ ಫಲಕದಲ್ಲಿ ಹಾಕುವುದು.

14. ವೃದ್ಧಾಶ್ರಮದ ಕಟ್ಟಡವು ಈ ಕೆಳಕಂಡ ಕೊಠಡಿಗಳನ್ನು ಹೊಂದಿರಬೇಕು

| ಕ್ರಸಂ | ಕೊಠಡಿಗಳ ವಿವರ | ಸಂಖ್ಯೆ | ವಿಸ್ತೀರ್ಣ |
|---|---|---|---|
| 1 | ಮಲಗುವ ಕೊಠಡಿ (15' * 15' ಚದರ ಅಡಿ) | 6 | 1350 ಚದರ ಅಡಿ |
| 2 | ಅಡುಗೆ ಮನೆ (15' * 10' ಚದರ ಅಡಿ)) | 1 | 150 ಚದರ ಅಡಿ |
| 3 | ಉಗ್ರಾಣ (10' * 20' ಚದರ ಅಡಿ) | 1 | 200 ಚದರ ಅಡಿ |
| 4 | ಕಾಮನ್ ರೂಂ (25' * 20' ಚದರ ಅಡಿ) | 1 | 500 ಚದರ ಅಡಿ |
| 5 | ಸ್ನಾನದ ಗೃಹ (6' * 6' ಚದರ ಅಡಿ) | 5 | 180 ಚದರ ಅಡಿ |
| 6 | ಶೌಚಾಲಯ (3' * 3' ಚದರ ಅಡಿ) | 5 | 45 ಚದರ ಅಡಿ |
| 7 | ಕಛೇರಿ (15' * 10 ಚದರ ಅಡಿ) | 1 | 150 ಚದರ ಅಡಿ |
| | ಒಟ್ಟು | | 2575 ಚದರ ಅಡಿ |

15. ಕಟ್ಟಡವು ನೀರು, ವಿದ್ಯುತ್‌ನ ವ್ಯವಸ್ಥೆಯನ್ನು ಒಳಗೊಂಡ ಎಲ್ಲಾ ಮೂಲಭೂತ ಸೌಕರ್ಯಗಳನ್ನು ಹೊಂದಿರಬೇಕು.

16. ಸಂಸ್ಥೆಯು ವೃದ್ಧ ಫಲಾನುಭವಿಗಳಿಂದ ಯಾವುದೇ ವಿಧವಾದ ಶುಲ್ಕ ದೇಣಿಗೆ, ವಂತಿಗೆ ಹಣ ಮುಂತಾದವುಗಳನ್ನು ಸ್ವೀಕರಿಸುವಂತಿಲ್ಲ.

17. ನಿವಾಸಿಗಳ ಮನೋರಂಜನೆಗಾಗಿ ದಿನಪತ್ರಿಕೆಗಳು, ನಿಯತಕಾಲಿಕೆಗಳು ಟಿ.ವಿ., ಭಜನೆ, ಸಾಂಸ್ಕೃತಿಕ ಕಾರ್ಯಕ್ರಮಗಳು ಹಾಗೂ ಪ್ರವಾಸಗಳನ್ನು ಹಮ್ಮಿಕೊಳ್ಳಬೇಕು.

18. ಇಲಾಖೆಯು ನಿಗದಿಪಡಿಸಿದ ನಮೂನೆಗಳಲ್ಲಿ ನಿಯಮಿತವಾಗಿ ಪ್ರಗತಿ ವರದಿಗಳನ್ನು ನಿರ್ದೇಶನಾಲಯಕ್ಕೆ ಸಲ್ಲಿಸುವುದು.

19. ಸಂಸ್ಥೆಯು ಕಾರಣಾಂತರಗಳಿಂದ ವೃದ್ಧಾಶ್ರಮವನ್ನು ಮುಚ್ಚಬೇಕಾದಲ್ಲಿ ಪಾಲಕರ ಪೋಷಣೆ, ಸಂರಕ್ಷಣೆ ಹಾಗೂ ಹಿರಿಯ ನಾಗರಿಕರ ರಕ್ಷಣೆ ಕಾಯ್ದೆ 2007ರನ್ವಯ ರಚಿತವಾದ ಜಿಲ್ಲಾ ಮಟ್ಟದ ಸಮಿತಿಯಲ್ಲಿ ಮಂಡಿಸಿ ಅದರ ಶಿಫಾರಸ್ಸಿನನ್ವಯ ನಿವಾಸಿಗಳಿಗೆ ಸೂಕ್ತ ಪರ್ಯಾಯ ವ್ಯವಸ್ಥೆ ಕಲ್ಪಿಸಿ ರದ್ದತಿಗೆ ನಿರ್ದೇಶನಾಲಯಕ್ಕೆ ಶಿಫಾರಸ್ಸು ಮಾಡುವುದು. ರದ್ದು ಮಾಡಲು ಸರ್ಕಾರದ ಆದೇಶ ಬಂದ ನಂತರ ಬೇರೆ ಸಂಸ್ಥೆಗೆ ವೃದ್ಧಾಶ್ರಮ ನಡೆಸಲು ಆಡಳಿತಾತ್ಮಕ ಅನುಮತಿಗಾಗಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸುವುದು.

20. ಸಂಸ್ಥೆಯು ಪ್ರತಿ ವರ್ಷ ಅನುದಾನಕ್ಕೆ ಪ್ರಸ್ತಾವನೆ ಸಲ್ಲಿಸುವಾಗ, ಸಂಸ್ಥೆಯ ಆಡಳಿತ, ಆರ್ಥಿಕ ಸುಸ್ಥಿತಿಯ ಬಗ್ಗೆ, ಅನುದಾನವನ್ನು ವೃದ್ಧಾಶ್ರಮದ ನಿರ್ವಹಣೆಗೆ ಮಾತ್ರ ಉಪಯೋಗಿಸುತ್ತೇವೆಂದು, ಕಾರ್ಯಕ್ರಮಗಳನ್ನು ಯೋಜನೆಯನ್ವಯ ಯಶಸ್ವಿಯಾಗಿ ನಡೆಸುತ್ತೇವೆಂದು, ಕಾಲಕಾಲಕ್ಕೆ ಪ್ರಗತಿ ವರದಿಗಳನ್ನು ಸಲ್ಲಿಸುತ್ತೇವೆಂದು ಮತ್ತು ಅನುದಾನವು ದುರುಪಯೋಗವಾದಲ್ಲಿ ಅಥವಾ ರಾಜ್ಯ ಸರ್ಕಾರವು ಹೊರಡಿಸಿದ ಆದೇಶ/ಸೂಚನೆಗಳನ್ನು ಪಾಲಿಸದ ಇದ್ದಲ್ಲಿ ವೃದ್ಧಾಶ್ರಮವನ್ನು ರದ್ದುಪಡಿಸಲು ಒಪ್ಪಿಕೊಳ್ಳುವುದಾಗಿ ಮತ್ತು ಸರ್ಕಾರದ ಹಣದ ದುರುಪಯೋಗದ ಆಪಾದನೆ ಮೇಲೆ ಶಿಕ್ಷೆಗೆ ಒಳಗಾಗಲು ಸಿದ್ಧರಿರುವುದಾಗಿ ಪ್ರಮಾಣೀಕರಿಸಬೇಕು.

..3

ಹೊಸಜಿಲ್ಲೆಗಳಲ್ಲಿ ವೃದ್ಧಾಶ್ರಮ ರಚನೆ:

1. ಯಾದಗಿರಿ, ರಾಮನಗರ ಮತ್ತು ಉಡುಪಿ ಜಿಲ್ಲೆಗಳಲ್ಲಿ ವೃದ್ಧಾಶ್ರಮವನ್ನು ಪ್ರಾರಂಭಿಸಲು ಇಚ್ಚಿಸುವ ಸಂಸ್ಥೆಗಳು ಆಯಾ ಜಿಲ್ಲೆಯಲ್ಲಿನ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು ಕರ್ನಾಟಕ ಪಾರದರ್ಶಕತೆ ಅಧಿನಿಯಮದಂತೆ ಅರ್ಜಿ ಸಲ್ಲಿಸುವಂತೆ ಪ್ರಕಟಣೆ ಹೊರಡಿಸಿದ ನಂತರ ನಿಗದಿತ ನಮೂನೆಯಲ್ಲಿ ಅರ್ಜಿ ಸಲ್ಲಿಸುವುದು.

2. ಸ್ವೀಕೃತವಾದ ಪ್ರಸ್ತಾವನೆಗಳನ್ನು ಪಾಲಕರ ಪೋಷಣೆ, ಸಂರಕ್ಷಣೆ ಹಾಗೂ ಹಿರಿಯ ನಾಗರಿಕರ ರಕ್ಷಣೆ ಕಾಯ್ದೆ 2007ರನ್ವಯ ರಚಿತವಾದ ಜಿಲ್ಲಾ ಮಟ್ಟದ ಸಮಿತಿಯಲ್ಲಿ ಮಂಡಿಸಿ, ಅದರ ಶಿಫಾರಸ್ಸಿನನ್ವಯ ಆಡಳಿತಾತ್ಮಕ ಮಂಜೂರಾತಿಗಾಗಿ ನಿರ್ದೇಶನಾಲಯದ ಮೂಲಕ ಸರ್ಕಾರಕ್ಕೆ ಸಲ್ಲಿಸುವುದು. ಸರ್ಕಾರದಿಂದ ಆಡಳಿತಾತ್ಮಕ ಮಂಜೂರಾತಿ ದೊರೆತ ನಂತರವೇ ವೃದ್ಧಾಶ್ರಮವನ್ನು ಪ್ರಾರಂಭಿಸುವುದು.

3. ಅನುದಾನವನ್ನು ವೃದ್ಧಾಶ್ರಮವನ್ನು ಪ್ರಾರಂಭಿಸಲು ಅನುಮತಿ ನೀಡಿದ ದಿನಾಂಕ/ಸಿಬ್ಬಂದಿಗಳ ನೇಮಕಾತಿ, ತನಿಖಾಧಿಕಾರಿಗಳ ಶಿಫಾರಸ್ಸು ಮತ್ತು ವಾಸ್ತವವಾಗಿ ವೃದ್ಧಾಶ್ರಮವನ್ನು ಪ್ರಾರಂಭಿಸಿದ ದಿನಾಂಕ ಮುಂತಾದವುಗಳ ಆಧಾರದ ಮೇಲೆ ಲೆಕ್ಕಾಚಾರ ಮಾಡಲಾಗುವುದು. ಈ ವಿಷಯದಲ್ಲಿ ಜಿಲ್ಲಾ ಪಂಚಾಯತಿಯ ಮುಖ್ಯಕಾರ್ಯನಿರ್ವಹಣಾಧಿಕಾರಿಗಳ ತೀರ್ಮಾನವೇ ಅಂತಿಮವಾಗಿರುತ್ತದೆ.

4. ನಿರ್ಗತಿಕ, ಬಡತನ ರೇಖೆಗಿಂತ ಕೆಳಗಿರುವ 25 ಹಿರಿಯ ನಾಗರಿಕರ ಈ ಹೊಸ ಜಿಲ್ಲೆಯಲ್ಲಿನ ವೃದ್ಧಾಶ್ರಮದ ನಿರ್ವಹಣೆಗೆ ಅನುಬಂಧ-1ರಲ್ಲಿ ವಿವರಿಸಿರುವಂತೆ ಸಂಸ್ಥೆಯ ವತಿಯಿಂದ ಭರಿಸಬೇಕಾದ ಶೇ.10ರಷ್ಟು ವೆಚ್ಚವನ್ನು ಹೊರತುಪಡಿಸಿ ಆವರ್ತಕ ವೆಚ್ಚಗಳನ್ನು ಭರಿಸಲು ಮಾತ್ರ ರೂ.8.00ಲಕ್ಷಗಳ ಅನುದಾನವನ್ನು ಜಿಲ್ಲಾ ವಲಯದಡಿ ಪಂಚಾಯತ್ ಮೂಲಕ ನೀಡಲಾಗುವುದು. ಅನಾವರ್ತಕ ವೆಚ್ಚಗಳನ್ನು ನೀಡಲಾಗುವುದಿಲ್ಲ. ನಿವಾಸಿಗಳ ಉಪಯೋಗಕ್ಕೆ ಬೇಕಾಗುವ ಮಂಚಗಳು ಹಾಸಿಗೆ ಹೊದಿಕೆ, ನಿವಾಸಿಗಳ ಬಟ್ಟೆ ಹಾಗೂ ವೈಯುಕ್ತಿಕ ವಸ್ತುಗಳ ಶೇಖರಣೆಗೆ ಸೂಕ್ತ ವ್ಯವಸ್ಥೆ, ಅಡುಗೆ ಮಾಡಲು ಪಾತ್ರೆಗಳು, ಪೀಠೋಪಕರಣಗಳು ಮುಂತಾದ ಸೌಲಭ್ಯಗಳನ್ನು ಸಂಸ್ಥೆಯು ಒದಗಿಸುವುದು.

**ಹೊಸ ವೃದ್ಧಾಶ್ರಮಗಳನ್ನು ಪ್ರಾರಂಭಿಸಲು ಸಂಸ್ಥೆಗೆ ಇರಬೇಕಾದ ಅರ್ಹತೆಗಳು:**

1. ಸ್ವಯಂ ಸೇವಾ ಸಂಸ್ಥೆಯು ಅಸ್ತಿತ್ವಕ್ಕೆ ಬಂದು ಕನಿಷ್ಠ 2 ವರ್ಷಗಳಾಗಿರಬೇಕು

2. ಸ್ವಯಂ ಸೇವಾ ಸಂಸ್ಥೆಯು ಸಾಕಷ್ಟು ಸಿಬ್ಬಂದಿ ವರ್ಗದೊಂದಿಗೆ ಅಗತ್ಯವಾದ ಮೂಲಭೂತ ಸೌಲಭ್ಯ, ಸಂಪನ್ಮೂಲ ಹಾಗೂ ಅನುಭವ ಮತ್ತು ಆರ್ಥಿಕವಾಗಿ ಸುಸ್ಥಿತಿಯುಳ್ಳ ಆಡಳಿತ ವರ್ಗದವರನ್ನು ಹೊಂದಿರಬೇಕು.

3. ಸ್ವಯಂ ಸೇವಾ ಸಂಸ್ಥೆಯು ವೃದ್ಧಾಶ್ರಮವನ್ನು ನಡೆಸುವಲ್ಲಿ ಅಥವಾ ಇಂತಹದ್ದೇ ಇನ್ನಿತರ ಕಾರ್ಯಕ್ರಮಗಳನ್ನು ನಡೆಸುವಲ್ಲಿ ಅನುಭವ ಹೊಂದಿರಬೇಕು ಅಥವಾ ವೃದ್ಧಾಶ್ರಮವನ್ನು ನಡೆಸಲು ದಕ್ಷತೆಯನ್ನು ಹೊಂದಿರುವ ಬಗ್ಗೆ ದಾಖಲೆಗಳನ್ನು ಹಾಜರುಪಡಿಸಬೇಕು.

4. ಸಂಸ್ಥೆಯು ಯಾವುದೇ ಓರ್ವ ವ್ಯಕ್ತಿ ಅಥವಾ ಒಂದು ಜನಾಂಗದ ಲಾಭಕ್ಕಾಗಿ ನಡೆಸುತ್ತಿರಬಾರದು

5. ಸಂಸ್ಥೆಯು ಅಧಿಕೃತವಾಗಿ ರಚಿತವಾಗಿರುವ ಆಡಳಿತ ಮಂಡಳಿಯನ್ನು ಹೊಂದಿದ್ದು, ಆಡಳಿತ ವರ್ಗದ ಅಧಿಕಾರ, ಕರ್ತವ್ಯಗಳು ಮತ್ತು ಜವಾಬ್ದಾರಿಗಳನ್ನು ಸ್ಪಷ್ಟ ಹಾಗೂ ಖಚಿತವಾಗಿ ಸಂಸ್ಥೆಯ ಬರವಣಿಗೆಯಲ್ಲಿನ ನಿಬಂಧನೆಗಳಲ್ಲಿ ನಿರೂಪಿತವಾಗಿರಬೇಕು.

6. ಸಂಸ್ಥೆಯ ಸೇವೆಗಳು ಯಾವುದೇ ಜಾತಿ, ಪಂಥ, ಮತ ಮತ್ತು ಭಾಷೆಗಳನ್ನು ಪರಿಗಣಿಸದೇ ಎಲ್ಲರಿಗೂ ವರ್ಷದ ಎಲ್ಲಾ ಕಾಲದಲ್ಲಿಯೂ ಲಭ್ಯವಿರಬೇಕು

7. ಈ ಯೋಜನೆಯ ಉದ್ದೇಶಕ್ಕಾಗಿ ಸ್ವಯಂ ಸೇವಾ ಸಂಸ್ಥೆಗಳು ಯಾವುದೆಂದರೆ :

   (ಅ) ಇಂಡಿಯನ್ ಸೊಸೈಟೀಸ್ ರಿಜಿಸ್ಟ್ರೇಷನ್ ಆಕ್ಟ್ 1860ರ ಪ್ರಕಾರ ನೋಂದಣಿಯಾಗಿರುವ ಸಂಸ್ಥೆ.

   (ಆ) ಯಾವುದೇ ಲಾಭ ಉದ್ದೇಶವಿಲ್ಲದೇ ನೋಂದಣಿಯಾಗಿರುವ ಚಾರಿಟಬಲ್ ಕಂಪನಿ

   (ಇ) ಭಾರದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಪ್ರಕಾರ ನೋಂದಣಿಯಾಗಿರುವ ಸಾರ್ವಜನಿಕ ಟ್ರಸ್ಟ್

   (ಈ) ನೋಂದಣಿಯಾಗಿ ಸಮಾಜ ಸೇವೆಯಲ್ಲಿ ತೊಡಗಿರುವ ಅಧಿಕಾರೇತರ ಸಂಸ್ಥೆಗಳು

   (ಉ) 1960ರ ಕರ್ನಾಟಕ ಸಂಘ ಸಂಸ್ಥೆಗಳ ಅಧಿನಿಯಮದ ಪ್ರಕಾರ ನೋಂದಣಿಯಾಗಿರುವ ಸಂಸ್ಥೆಗಳು.

1. ಇದೇ ಉದ್ದೇಶಕ್ಕಾಗಿ ಕೇಂದ್ರ ಸರ್ಕಾರದಿಂದಾಗಲೀ ಅಥವಾ ರಾಜ್ಯ ಸರ್ಕಾರದ ಇತರೆ ಇಲಾಖೆಗಳಿಂದಾಗಲೀ ಅನುದಾನ ಸ್ವೀಕರಿಸುತ್ತಿದ್ದಲ್ಲಿ ಈ ಯೋಜನೆಯಡಿ ಅನುದಾನ ಪಡೆಯಲು ಅರ್ಹವಾಗುವುದಿಲ್ಲ.

2. ಸಂಸ್ಥೆಯು ಪ್ರತಿ ವರ್ಷ ಅನುದಾನಕ್ಕೆ ಪ್ರಸ್ತಾವನೆ ಸಲ್ಲಿಸುವಾಗ, ಸಂಸ್ಥೆಯ ಆಡಳಿತ, ಆರ್ಥಿಕ ಸುಸ್ಥಿತಯ ಬಗ್ಗೆ, ಅನುದಾನವನ್ನು ವೃದ್ಧಾಶ್ರಮದ ನಿರ್ವಹಣೆಗೆ ಮಾತ್ರ ಉಪಯೋಗಿಸುತ್ತೇವೆಂದು, ಕಾರ್ಯಕ್ರಮಗಳನ್ನು ಯೋಜನೆಯನ್ವಯ ಯಶಸ್ವಿಯಾಗಿ ನಡೆಸುತ್ತೇವೆಂದು. ಕಾಲಕಾಲಕ್ಕೆ ಪ್ರಗತಿ ವರದಿಗಳನ್ನು ಸಲ್ಲಿಸುತ್ತೇವೆಂದು ಮತ್ತು ಅನುದಾನವು ದುರುಪಯೋಗವಾದಲ್ಲಿ ಅಥವಾ ರಾಜ್ಯ ಸರ್ಕಾರವು ಹೊರಡಿಸಿದ ಆದೇಶ/ಸೂಚನೆಗಳನ್ನು ಪಾಲಿಸದೆ ಇದ್ದಲ್ಲಿ ವೃದ್ಧಾಶ್ರಮವನ್ನು ರದ್ದುಪಡಿಸಲು ಒಪ್ಪಿಕೊಳ್ಳುವುದಾಗಿ ಮತ್ತು ಸರ್ಕಾರದ ಹಣದ ದುರುಪಯೋಗದ ಆಪಾದನೆ ಮೇಲೆ ಶಿಕ್ಷೆಗೆ ಒಳಗಾಗಲು ಸಿದ್ಧರಿರುವುದಾಗಿ ಪ್ರಮಾಣೀಕರಿಸಬೇಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಬಿ.ಕಮಲಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ.